# ಬದಲಾಗುತ್ತಿರುವ ಸಂದರ್ಭದಲ್ಲಿ ಡೊಂಬರ ಸಾಮಾಜಿಕ ಮತ್ತು ಆರ್ಥಿಕ ಜೀವನ

(ಬಳ್ಳಾರಿ ಜಿಲ್ಲೆಯನ್ನು ಪರಿಗಣಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಾದರಪಡಿಸುತ್ತಿರುವ ಸಂಪ್ರಬಂಧ


ಸಂಶೋಧಕ

ಹನುಮೇಶ್ .ಹೆಚ್

ಮಾರ್ಗದರ್ಶಕರು

ಶ್ರೀ. [illegible] ಎಸ್. ಪ್ರಭಾಕರ

ಅಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ





ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬

೨೦೦೩

# ಬದಲಾಗುತ್ತಿರುವ ಸಂದರ್ಭದಲ್ಲಿ ಡೊಂಬರ ಸಾಮಾಜಿಕ ಮತ್ತು ಆರ್ಥಿಕ ಜೀವನ

## (ಬಳ್ಳಾರಿ ಜಿಲ್ಲೆಯನ್ನು ಪರಿಗಣಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಾದರಪಡಿಸುತ್ತಿರುವ ಸಂಪ್ರಬಂಧ

ಸಂಶೋಧಕ

ಹನುಮೇಶ್ .ಹೆಚ್

ಮಾರ್ಗದರ್ಶಕರು

ಶ್ರೀ. ಎ.ಎಸ್. ಪ್ರಭಾಕರ

ಅಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ





ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೨



# ದೃಢೀಕರಣ ಪತ್ರ

ಶ್ರೀ ಹನುಮೇಶ್ .ಹೆಚ್ ಇವರು ಬದಲಾಗುತ್ತಿರುವ ಸಂದರ್ಭದಲ್ಲಿ ಡೊಂಬರ ಸಾಮಾಜಿಕ ಮತ್ತು ಆರ್ಥಿಕ ಜೀವನ (ಬಳ್ಳಾರಿ ಜಿಲ್ಲೆಯನ್ನು ಪರಿಗಣಿಸಿ) ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಈ ಸಂಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 30-04-03
ಸ್ಥಳ : ವಿದ್ಯಾರಣ್ಯ

20.04.02
ಎ.ಎಸ್. ಪ್ರಭಾಕರ
ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪ್ರಮಾಣ ಪತ್ರ

ಬದಲಾಗುತ್ತಿರುವ ಸಂದರ್ಭದಲ್ಲಿ ಡೊಂಬರ ಸಾಮಾಜಿಕ ಮತ್ತು ಆರ್ಥಿಕ ಜೀವನ (ಬಳ್ಳಾರಿ ಜಿಲ್ಲೆಯನ್ನು ಪರಿಗಣಿಸಿ) ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎ.ಎಸ್. ಪ್ರಭಾಕರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 30-04-03
ಸ್ಥಳ : ವಿದ್ಯಾರಣ್ಯ

Hanumesh H
ಹನುಮೇಶ್ .ಹೆಚ್
ಸಂಶೋಧಕ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

ಅಧ್ಯಾಯ ೧

**ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ** ೦೧ - ೦೯

ಅಧ್ಯಾಯ ೨

**ಡೊಂಬರ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು** ೧೦ - ೨೬

ಅ. ಸಮಾಜದ ಚಾರಿತ್ರಿಕ ಬೆಳವಣಿಗೆ

ಆ. ಆರ್ಥಿಕ ರೂಪಾಂತರಗಳು

ಇ. ವರ್ತಮಾನದಲ್ಲಿ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು

ಅಧ್ಯಾಯ ೩

**ಬದಲಾಗುತ್ತಿರುವ ಸಾಮಾಜಿಕ ಮತ್ತು ಆರ್ಥಿಕ ಸಂದರ್ಭಗಳು** ೨೭ - ೪೦

ಅ. ಬದಲಾಗುತ್ತಿರುವ ಜಾಗತಿಕ ವಿದ್ಯಮಾನಗಳು

ಆ. ಮೂರನೇ ಜಗತ್ತಿನ ದೇಶಗಳ ಸಾಮಾಜಿಕ ಆರ್ಥಿಕ ಸಂದರ್ಭಗಳು

ಇ. ಅಲೆಮಾರಿಗಳ ಬದಲಾಗುತ್ತಿರುವ ಬದುಕು

ಅಧ್ಯಾಯ ೪

**ಬಳ್ಳಾರಿ ಜಿಲ್ಲೆಯ ಡೊಂಬರ ಆರ್ಥಿಕ ಸ್ಥಿತಿಗತಿಗಳು** ೪೧ - ೫೫

ಅ. ಬಳ್ಳಾರಿ ಜಿಲ್ಲೆಯ ಡೊಂಬರ ಕಸಬುಗಳು

ಆ. ಕೃಷಿ ಸಂಬಂಧಿ ಚಟುವಟಿಕೆಗಳು

ಇ. ಶೈಕ್ಷಣಿಕ ಸ್ಥಾನಮಾನಗಳು

ಅಧ್ಯಾಯ ೫

**ವರ್ತಮಾನದಲ್ಲಿ ಬಳ್ಳಾರಿ ಜಿಲ್ಲೆಯ ಡೊಂಬರ ಸಮುದಾಯದ ಸ್ಥಾನಮಾನಗಳು** ೫೬ - ೮೭

ಅ. ಬಳ್ಳಾರಿ ಜಿಲ್ಲೆಯ ಇತರೆ ಸಮುದಾಯಗಳು ಮತ್ತು ಡೊಂಬರು

ಆ. ಆರ್ಥಿಕ ಕ್ಷೇತ್ರದಲ್ಲಿನ ಸ್ಥಾನಮಾನಗಳು

ಇ. ವರ್ತಮಾನದಲ್ಲಿ ಈ ಸಮುದಾಯ ಎದುರಿಸುತ್ತಿರುವ ಸಮಸ್ಯೆಗಳು

**ಸಮಾರೋಪ** ೮೮ - ೯೧

**ಅನುಬಂಧ** ೯೨ - ೧೦೦

ಗ್ರಂಥಋಣ

ಕೋಷ್ಠಕಗಳು

ವಕ್ತೃ ವಿವರ

ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

ಭಾರತ ಹಲವು ಜಾತಿ ಸಮುದಾಯಗಳಿಂದ ಕೂಡಿದ ಸಮಾಜವಾಗಿದೆ. ಆದಿವಾಸಿಗಳು, ಅಲೆಮಾರಿಗಳು. ಅರೆಅಲೆಮಾರಿಗಳು. ಅಸಂಖ್ಯಾತ ಜಾತಿಸಮುದಾಯಗಳು ಇಂಡಿಯಾದ ಸಮಾಜವನ್ನು ರೂಪಿಸಿವೆ. ಅಧಿಕಾರಸ್ಥ ಸಮುದಾಯಗಳು ತಮ್ಮ ಹಿತಾಸಕ್ತಿಗಾಗಿ ಈ ಸಮಾಜವನ್ನು ಹೀನ ಶ್ರೇಣೀಕರಣಕ್ಕೆ ಒಳಪಡಿಸಿವೆ. ಯಾವ ಬಗೆಯ ಸಾಮಾಜಿಕ, ಆರ್ಥಿಕ ಅಧಿಕಾರಗಳನ್ನ ಪಡೆಯದ ದುಡಿವ ವರ್ಗ ಮತ್ತು ಕೆಳಜಾತಿಗಳು, ಸಂಪತ್ತಿನ ಸಮಾನ ಹಂಚಿಕೆಯ ಕುರಿತು ದನಿ ಎತ್ತದಂತಹ ಸರ್ವಾಧಿಕಾರಿ ಧೋರಣೆಯನ್ನು. ಪಟ್ಟಭದ್ರರು ನವೀಕರಿಸುತ್ತಲೇ ಬಂದಿದ್ದಾರೆ. ಈ ಕಾರಣಕ್ಕಾಗಿ ಇಂಡಿಯಾದ ಸಮಾಜವು ಹಲವು ಅಧಿಕಾರರಹಿತ ಸಮುದಾಯಗಳನ್ನು ತನ್ನ ಒಡಲಲ್ಲಿ ಇಟ್ಟುಕೊಂಡಿದೆ. ಅಲ್ಲದೆ ಎದ್ದುಕಾಣುವ ಹಲವು ವೈರುಧ್ಯಗಳು ಇನ್ನು ಈ ಸಮಾಜವನ್ನು ಕಾಡುತ್ತಲೇ ಇವೆ. ಈ ಸಾಮಾಜಿಕ ವೈರುಧ್ಯಗಳ ಒಂದು ಭಾಗವಾಗಿ ಹಲವು ಸಮುದಾಯಗಳು ಇನ್ನೂ ತಮ್ಮ ಹಕ್ಕುಬಾಧ್ಯತೆಗಳ ಕುರಿತು ಸೊಲ್ಲೆತ್ತಲಾಗಿಲ್ಲ. ಆದಿವಾಸಿ, ಅಲೆಮಾರಿ ಸಮುದಾಯಗಳಂತೂ 'ಮುಖ್ಯ ಪ್ರವಾಹ'ದ ಆಚೆಗೆ ನಿಂತುಕೊಂಡು ಬಿಟ್ಟಿವೆ.

ಪ್ರಸ್ತುತ ಅಧ್ಯಯನ ಡೊಂಬರ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳನ್ನು ಕುರಿತದ್ದಾಗಿದೆ. ಡಬ್ಲ್ಯು ಕ್ರುಕ್ ಹೇಳುವಂತೆ: "ಡೊಂಬರು ಆರ್ಯರಿಂದ ತುಳಿಯಲ್ಪಟ್ಟ ಸಾಮಾಜಿಕ ತಿರಸ್ಕಾರಕ್ಕೆ ಒಳಗಾದವರೆಂದು"[1], ಇವರಿಗೆ ನಿಲ್ಲಲು ನೆಲೆಯಿಲ್ಲದೆ. ಕೆಲಸಮಾಡುವ ಕೈಗಳಿಗೆ ಕೆಲಸವಿಲ್ಲದೆ, ಹಸಿವು ನೀಗಿಸಿಕೊಳ್ಳಲು ತಮ್ಮ ಜೀವನದುದ್ದಕ್ಕೂ ಅಲೆಮಾರಿ ಬದುಕು ಬದುಕಬೇಕಾಯಿತು. ಅಲೆಮಾರಿ "ಡೊಂಬರು ಒಂದು ವಿಶಿಷ್ಟ ಸಂಸ್ಕೃತಿಯ ವಾರಸುದಾರರು. ಏಕೆಂದರೆ ಪರಿಸರ ಎನ್ನುವುದು ಎಲ್ಲ ಸಂಸ್ಕೃತಿಗಳ ತವರು. ವಿವಿಧ ಸಂಸ್ಕೃತಿಗಳ ತೊಟ್ಟಿಲು"[2] ಇಂದು ಇವರ ಆದಿಮ ಸಂಸ್ಕೃತಿ, ನಾಡಿನ ಸಂಸ್ಕೃತಿಯೊಂದಿಗೆ ಬೆರೆತು ನಿಜವಾದ ಸಂಸ್ಕೃತಿ ಮರೆ ಮಾಚಿಸಿಕೊಳ್ಳುವಂತಾಗಿದೆ.

"ಈ ಸಮುದಾಯವು ಶ್ರೇಣೀಕೃತ ಜಾತಿವ್ಯವಸ್ಥೆಗೆ ಒಳಗಾದ ಅಲೆಮಾರಿ ಡೊಂಬರು ಸಾಮಾಜಿಕ ವ್ಯವಸ್ಥೆಯ ಯಾವುದೇ ಬಗೆಯ ಸ್ಥಾನಮಾನ ಗೌರವಗಳಿಗೂ ಪಾತ್ರರಾಗಲಿಲ್ಲ. ಅತ್ತ ತಮ್ಮ ಮೂಲ ವೃತ್ತಿಯನ್ನು ಪೋಷಿಸಿಕೊಳ್ಳಲು ಸಹ ಶಕ್ತರಾಗಲಿಲ್ಲ. ಹೀಗೆ ಅನೇಕ ಬಗೆಯ ಆರ್ಥಿಕ ಒತ್ತಡಗಳಿಗೆ ಒಳಗಾದವರು."[೩] ರಾಜಶಾಹಿ ಕಾಲದಲ್ಲಾಗಲಿ ವಸಾಹತುಶಾಹಿ ಕಾಲಘಟ್ಟದಲ್ಲಾಗಲೀ, ಸ್ವಾತಂತ್ರ್ಯ ನಂತರ ವಾಗಲಿ. ಆಳುವ ವರ್ಗಗಳು ಅಲೆಮಾರಿ ಸಮುದಾಯಗಳ ಶ್ರೇಯೋಭಿವೃದ್ಧಿಗೆ ಕಿಂಚಿತ್ತು ಗಮನಹರಿಸಲಿಲ್ಲ. ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಬಲಿಷ್ಠರೊಡನೆ, ನಿಶ್ಯಕ್ತ ಸಮುದಾಯಗಳು ಸಂಘರ್ಷ ಮಾಡಬೇಕಾಗಿದೆ. ಸ್ವಾತಂತ್ರ್ಯ ಬಂದ ಆರಂಭದಲ್ಲಿ ಸಾಮಾಜಿಕ ಅಸಮಾನತೆಯನ್ನು ತೊಲಗಿಸಿ, ಬಡವರನ್ನು ಉದ್ಧಾರ ಮಾಡುತ್ತೇವೆಂದು ಸರಕಾರವು ಬಾಯಿ ಮಾತಿನ ಮೂಲಕ ಹೇಳುತ್ತಾ ವ್ಯರ್ಥ ಕಾಲಹರಣ ಮಾಡುತ್ತಾ ಬಂದಿದೆ. ಸ್ವಾತಂತ್ರ್ಯನಂತರ ಸರಕಾರವು ಕೈಗೊಂಡ ಅನೇಕ ಯೋಜನೆಗಳು ಶ್ರೀಮಂತರ ಅಭಿವೃದ್ಧಿಯ ಪರವಾಗಿಯೇ ಇದ್ದವು. ಆವತ್ತಿನ ನೀತಿ ಈಗಲೂ ಮುಂದುವರೆದಿದೆ. ಬದಲಾಗುತ್ತಿರುವ ಅಲೆಮಾರಿ ಸಮುದಾಯಗಳ ಕುರಿತಾದ ನಿರ್ದಿಷ್ಟವಾದ ಯಾವ ಯೋಜನೆಯನ್ನು ಸಹ ಸರ್ಕಾರ ಹಾಕಿಕೊಳ್ಳಲಾಗಿಲ್ಲ. ಬಡತನ ನಿವಾರಣೆಯ ಕಾರ್ಯಕ್ರಮಗಳು ಆಡಳಿತ ದೋಷದಿಂದಾಗಿ ಮುಟ್ಟಬೇಕಾದವರಿಗೆ ಮುಟ್ಟುತ್ತಿಲ್ಲ. ಒಂದಿಷ್ಟು ಅಂಕಿ ಅಂಶಗಳ ಸಹಾಯದಿಂದ ಸರಕಾರವೇನೂ ಇಷ್ಟು ಜನರನ್ನು ಬಡತನ ರೇಖೆಯಿಂದ ಮೇಲೆತ್ತಲಾಗಿದೆ ಎಂದು ಬೆನ್ನು ತಟ್ಟಿಕೊಳ್ಳಬಹುದು. ಆದರೆ ಸಿರಿವಂತರ ಮತ್ತು ಬಡವರ ನಡುವಣ ಅಂತರ ಎಂದಿಗೂ ಸರಿಪಡಿಸಲು ಸಾಧ್ಯವಿಲ್ಲದ ಸ್ಥಿತಿ ತಲುಪಿದೆ.

ಎಲ್ಲ ಸಮುದಾಯಗಳಿಗೂ ಸಂಪತ್ತಿನ ಹಂಚಿಕೆಯಲ್ಲಿ ಸಮಾನ ಪಾಲು ದಕ್ಕಬೇಕಾಗಿದೆ. ಆದರೆ ಸಾಮರ್ಥ್ಯಕ್ಕನುಗುಣವಾಗಿ, ಅಗತ್ಯಕ್ಕನುಗುಣವಾಗಿ ಆದಾಯ ಹಂಚುವಂತ ಮಾತು ಕನಸಾಗಿಯೇ ಉಳಿದಿದೆ. "ಭಾರತದಂತ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಡೊಂಬರು ಸಾಮಾಜಿಕ ಅಸಮಾನತೆ ಯಡಿಯಲ್ಲಿ ಸಿಲುಕಿ, ಶೋಚನೀಯವಾಗಿ ಬದುಕುವಂತಾಗಿದೆ. ಮತ್ತು ಇತರೆ ಯಾವುದೇ ಬಗೆಯ ಸ್ಥಾನಮಾನ, ಗೌರವಗಳಿಗೂ ಪಾತ್ರರಾಗಿಲಿಲ್ಲ."[೪] ಅತ್ತ ತಮ್ಮ ಕುಲಕಸುಬಾದ ಬೀದಿ ಪ್ರದರ್ಶನವನ್ನು ಸಹ ಪಾಲಿಸಿ, ಪೋಷಿಸಿಕೊಳ್ಳಲಾಗುತ್ತಿಲ್ಲ. ಹೀಗೆ ಅನೇಕ ಆರ್ಥಿಕ ಒತ್ತಡಗಳಿಗೆ ಸಿಲುಕಿ ಡೊಂಬರ ಜೀವನ ಶೋಚನೀಯವಾಗಿದೆ.

ಪ್ರತಿಕ್ಷಣವು ಬದಲಾಗುತ್ತಿರುವ ಇಂದಿನ, ಸಾಮಾಜಿಕ, ಆರ್ಥಿಕ ಸಂದರ್ಭದಲ್ಲಿ ಬಡತನ ಅಜ್ಞಾನ, ಹಸಿವು, ಆರ್ಥಿಕ, ಸಾಮಾಜಿಕ ಶೋಷಣೆ ಅಧಿಕವಾಗುತ್ತಲೇ ನಡೆದಿವೆ. ಆದರೆ ಶೋಷಣೆಯ ಸ್ವರೂಪ ಮಾತ್ರ ಬೇರೆಯಾಗಿದೆ. ಹೀಗೆ, ಹತ್ತು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿರುವ ಹಿನ್ನೆಲೆಯಲ್ಲಿ ಡೊಂಬರ ಸಮುದಾಯವು ದಿಕ್ಕುತಪ್ಪುವಂತಾಗಿದೆ.

ಈ ಸಮುದಾಯ ಇತರ ಸಮುದಾಯಗಳ ಸಹಭಾಗಿತ್ವ ಪಡೆಯಲು ಹವಣಿಸುತ್ತಿದೆ. ಇದು ಸಾಧ್ಯವಾಗುತ್ತಿಲ್ಲ. ಇದುವರಿಗೂ ಸರಕಾರ ರೂಪಿಸಿರುವ ಕಲ್ಯಾಣ ಕಾರ್ಯಕ್ರಮಗಳು ಯಾವ ಪ್ರಮಾಣದಲ್ಲಿ ಡೊಂಬರ ಸಮುದಾಯವನ್ನು ತಲುಪಿವೆ ? ಬದಲಾಗುತ್ತಿರುವ ಸಂದರ್ಭದಲ್ಲಿ ಡೊಂಬರ ಸಾಮಾಜಿಕ, ಆರ್ಥಿಕ, ರೂಪಾಂತರಗಳ ಸ್ವರೂಪವೇನು ಅನ್ನುವಂತಹ ಹಲವಾರು ವಿಷಯಗಳ ಕುರಿತು ಪ್ರಬಂಧದಲ್ಲಿ ಉದ್ದಕ್ಕೂ ಚರ್ಚಿಸಲು ಯತ್ನಿಸಲಾಗಿದೆ.ಅಲೆಮಾರಿ ಡೊಂಬರು ಸಾವಿರಾರು ವರ್ಷಗಳ ಕಾಲ ಅಲೆಮಾರಿ ಜೀವನ ನಡೆಸಿದ ನಂತರ ಅಲೆಮಾರಿ ಜೀವನದಿಂದ ಬೇಸತ್ತು. ಇಂದು ಒಂದು ಕಡೆ ನೆಲೆನಿಂತು ಜೀವನ ನಡೆಸುತ್ತಿದ್ದಾರೆ. ಹೀಗೆ ನೆಲೆನಿಂತ ಡೊಂಬರ ಸಮುದಾಯವು ಇಂದು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದೆ. ಡೊಂಬರು ಸಹ ಈ ನೆಲೆದ ಜಲದ ನಾಡಿನ ವಾರಸುದಾರರು, ಈಗಿದ್ದರೂ ಸಹ, ಡೊಂಬರು ವಸತಿ ಹೀನರಾಗಿ, ಭೂವಂಚಿತರಾಗಿ ಮೂಲಭೂತ ಸೌಲಭ್ಯಗಳಿಂದ ತಿರಸ್ಕೃತರಾಗಿ ಸರ್ಕಾರದ ಯೋಜನೆಗಳಿಂವ ವಂಚಿತರಾಗಿ ಅಧಿಕಾರಿಗಳ ಅಸಮರ್ಪಕ ತಿಳುವಳಿಕೆಯಿಂದಾಗಿ ಡೊಂಬರಿಗೆ ಜಾತಿ ಪ್ರಮಾಣಪತ್ರ ನೀಡಲು ತಿರಸ್ಕಾರ ಮಾಡುತ್ತಿದ್ದಾರೆ. ಹೀಗೆ ಶೈಕ್ಷಣಿಕ ಆರ್ಥಿಕ ರಾಜಕೀಯ ಇನ್ನು ಮುಂತಾದ ಹಲವಾರು ವಿಷಯಗಳಿಗೆ ಸಂಬಂಧಿಸಿದಂತೆ ಡೊಂಬರು ತೀರ ಹಿಂದುಳಿದಿದ್ದಾರೆ. ಇಂದಿನ ಪ್ರಜಾಪ್ರಭುತ್ವದ ವ್ಯವಸ್ಥೆ ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ, ದೀಪದ ಸಮೀಪದ ಸಮುದಾಯಗಳ ಮೇಲೆ ಮಾತ್ರ ಬೆಳಕು ಚೆಲ್ಲುತ್ತಿದೆ. ಆ ದೀಪದ ಬೆಳಕಿನ ಆಚೆಗೆ ಉಳಿದುಕೊಂಡಿರುವ ಬುಡಕಟ್ಟು, ಅಲೆಮಾರಿ ಸಮುದಾಯಗಳ ಮೇಲೆ ಬೆಳಕು ಚೆಲ್ಲುವಂತ ಪ್ರಯತ್ನವನ್ನು ಸರ್ಕಾರವು ಯಾವಾಗಲೋ ಮಾಡಬೇಕಿತ್ತು. ಆದರೆ ಇಂಥಹ ಸಮುದಾಯಗಳ ಮೇಲೆ ಆವರಿಸಿರುವ ಕಗ್ಗತ್ತಲ್ಲನ್ನು ಹೊಡೆದೋಡಿಸುವ ಕಡೆ ಸರ್ಕಾರವು ಇದುವರೆಗೂ ಪ್ರಮಾಣಿಕ ಪ್ರಯತ್ನ ಮಾಡದಿರುವುದು ತಲೆ ತಗ್ಗಿಸುವ ಸಂಗತಿಯಾಗಿವೆ.

ಸಾಮಾಜಿಕ ವ್ಯವಸ್ಥೆಯ ಅಳತೆಗೋಲು ಆರ್ಥಿಕ ವ್ಯವಸ್ಥೆಯ ಮಟ್ಟ. ಇದು ಒಂದು ಜನ ಸಮೂಹದ ಸ್ಥಾನಮಾನ ನಿರ್ಧರಿಸುತ್ತದೆ, ಯಾವ ಸಮುದಾಯದ ಆರ್ಥಿಕ ಸ್ಥಿತಿಯು ಉತ್ತಮವಾಗಿರುತ್ತದೆಯೋ ಆ ಸಮುದಾಯ ಆಧುನೀಕರಣಗೊಂಡು ಬದಲಾಗುತ್ತಿರುವ ಸಮಾಜದೊಂದಿಗೆ ತಾನು ಬೆಳೆದು ಬರುತ್ತಿರುತ್ತದೆ. ಇಂಥ ಆರ್ಥಿಕ ವ್ಯವಸ್ಥೆಯನ್ನು ನಿರ್ಧರಿಸುವ ಆ ಸಮುದಾಯದ ಉತ್ಪಾದನೆ ಅತಿ ಪ್ರಮುಖ ಪಾತ್ರವಹಿಸುತ್ತಿರುತ್ತದೆ. ಸುಮಾರು ಕಾಲ ಶತಮಾನ ಕಾಲ ಇಂಡಿಯಾದಲ್ಲಿ ಕಾಂಗ್ರೆಸ್ಸಿನ ಭದ್ರಕೋಟೆ ರಾಜ್ಯಭಾರ ನಡೆದಿತ್ತು. "೬೦ರ ದಶಕಗಳಲ್ಲಿ ರೂಪಾಯಿಗಳ ಅಪಮೌಲ್ಯಾಧಾರಕವಾಗಿ ಹರಿದು ಬರುತ್ತಿದ್ದ ಸಾಮ್ರಾಜ್ಯಶಾಹಿಗಳ ಸಾಲಗಳು, ಭೀಕರವಾದ ಬರಗಾಲ ಇವು ಇಂಡಿಯಾದ ಶರೀರದ ನರನಾಡಿಗಳನ್ನು ಕಂಪಿಸುವಂತೆ ಮಾಡಿದವು."[೫]

ಹಾಗೆಯೇ ಇಂದು ಜಾತೀಯ ಸಂಘಟನೆಗಳು ಏಕೆ ಹುಟ್ಟುತ್ತಲಿವೆ? ಅವುಗಳ ಅಗತ್ಯವೇನು? ಎಂಬುದರ ಚರ್ಚೆ ಅಗತ್ಯ. ಈ ಹೊತ್ತಿನ ಬೌದ್ಧಿಕ ಚರ್ಚೆಯಲ್ಲಿ ಪ್ರಜಾಪ್ರಭುತ್ವದ, ಸಮಾನತೆಯ, ಜಾತಿವಿನಾಶದ ಕುರಿತು ಚರ್ಚೆಗಳು ನಡೆಯುತ್ತಿವೆ. ಈ ಎಲ್ಲಾ ಹಿನ್ನೆಲೆಯನ್ನು ಇಟ್ಟುಕೊಂಡು ಜಾತಿಸಂಘಟನೆಗಳು ಭದ್ರಗೊಳ್ಳುತ್ತಿರುವುದರಿಂದ ಚರ್ಚೆಯನ್ನು ತಾತ್ವಿಕ ಚರ್ಚೆಯಲ್ಲಿಟ್ಟು ನೋಡಿದರೆ, ಅದಕ್ಕೊಂದು ಅರ್ಥ ದೊರೆಯಬಹುದು. ಇಂದು ರಾಜ್ಯದಲ್ಲಿ ನೆಡೆಯುತ್ತಿರುವ ಜಾತಿಕೇಂದ್ರಿತ ರಾಜಕೀಯವು ಪ್ರಭಲ ಜಾತಿಯ ಸಮುದಾಯಗಳನ್ನೂ ಒಳಗೊಂಡಿರುವಂತಹದು. ಅವರವರ ಸಮುದಾಯಗಳ ಬಹುಮತಗಳ ಆಳ್ವಿಕೆಯಲ್ಲಿ ಬಹುತೇಕ ನೆಡೆಯುತ್ತಿವೆ. ಇದು ಸಾಮಾನ್ಯವಾಗಿ ಶಕ್ತಿರಾಜಕಾರಣವನ್ನು ಒಳಗೊಂಡಿರುವಂತಹದು. ಇದು ರಾಜಕೀಯದಲ್ಲಿ ಮಾತ್ರವಲ್ಲ ಅಧಿಕಾರದ ಶಕ್ತಿ ಜಾತಿರಾಜಕಾರಣದಲ್ಲೂ ಕೆಲಸ ಮಾಡುತ್ತಿದೆ. ಹೀಗಿದ್ದಾಗ ಡೊಂಬರಂತಹ ಅಲ್ಪಸಂಖ್ಯಾತ ಸಮುದಾಯವು ತೋಳ್ಬಲದ ರಾಜಕಾರಣವನ್ನು ಮಾಡಲಾಗದೆ ಅಸಹಾಯಕವಾಗಿ ನಿಲ್ಲುತ್ತದೆ.

ಜಾತಿ ಸಂಘಟನೆಯ ಪ್ರಬಲತೆಗೆ ಕೆಲವು ಕಾರಣಗಳನ್ನು ಕೊಡಬಹುದು ಅವುಗಳಲ್ಲಿ ಜಾತಿಗಳು ತಮ್ಮ ಜಾತೀಯ ರಾಜಕೀಯ ನಾಯಕನನ್ನು ಬಯಸುತ್ತವೆ. ಹಾಗೂ ಧಾರ್ಮಿಕ ನಾಯಕನನ್ನು ಬಯಸುತ್ತವೆ. ಇದು ಅಗತ್ಯವೇ ಎಂಬುದು ಪ್ರಶ್ನೆಯಾಗಿ ನಿಲ್ಲುತ್ತದೆ. ಅಗತ್ಯವೆಂದರೆ ಹಲವು ಸಮುದಾಯಗಳನ್ನು ಒಳಗೊಂಡ ಆಡಳಿತದಲ್ಲಿ ರಾಜಕೀಯದಲ್ಲಿ ತಮ್ಮ ಸಮುದಾಯಗಳ ಸ್ಥಾನ ಎಂಥದ್ದು ಎಂಬುದು ಸಮುದಾಯದಲ್ಲೇ ಹುಟ್ಟುತ್ತದೆ. ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಮೀಸಲಾತಿಯಾಗಿ ಹಂಚಿಹೋಗಿರುವ ಜಾತಿ ಸಮುದಾಯಗಳಿಗೆ ಅವುಗಳು ತಮ್ಮ ಸಮುದಾಯಗಳನ್ನು ರಾಜಕೀಯವಾಗಿ ಪ್ರಬಲಗೊಳಿಸುವುದೇ ಆಗಿದೆ.

## ಅಧ್ಯಯನದ ಉದ್ದೇಶ

ಡೊಂಬರ ಸಮುದಾಯವು ಇತ್ತೀಚೆಗಷ್ಟೆ ನಾಗರೀಕ ಸಮುದಾಯಗಳೊಂದಿಗೆ ಸಹಜೀವನ ನಡೆಸಲು ಆರಂಭಿಸಿದೆ. ಅಲೆಮಾರಿತನದಿಂದ ಮುಕ್ತ ಪಡೆದು ನೆಲೆನಿಲ್ಲಲು, ದುಡಿಮೆಯ ಹೊಸ ಆಯಾಮಗಳನ್ನು ಕಂಡುಕೊಳ್ಳಲು ಯತ್ನಿಸುತ್ತಿದೆ. ಆದರೆ ಈ ಪ್ರಯತ್ನಗಳು ತುಂಬಾ ತಡವಾಗಿ ಪ್ರಾರಂಭವಾಗಿವೆ. ತಮ್ಮ ಪಾರಂಪರಿಕ ಆರ್ಥಿಕ ಮೂಲಗಳನ್ನು ಕಳೆದುಕೊಂಡ ಮೇಲೆ ಡೊಂಬರು ನಿಶ್ಚಿತ ಆರ್ಥಿಕ ಮೂಲಗಳನ್ನು ಕಳೆದುಕೊಂಡ ಮೇಲೆ ಡೊಂಬರು ನಿಶ್ಚಿತ ಆರ್ಥಿಕ ಮೂಲಗಳನ್ನು ಕಂಡುಕೊಳ್ಳಲು ಹೆಣಗುತ್ತಿದ್ದಾರೆ. ಈ ಬಗೆಯ ಆರ್ಥಿಕ ಅಸಮಾನತೆಯು ಭಾರತದ ಸಾಮಾಜದ ಪ್ರತಿ ಹಂತದಲ್ಲೂ ತಲೆದೂರುತ್ತಲೇ ಬಂದಿದೆ. ರಾಜಶಾಹಿ ಮತ್ತು ಮಧ್ಯಕಾಲೀನ, ವಸಾಹತುಶಾಹಿಯ ಕಾಲಘಟ್ಟದಲ್ಲಿ ಈ ಅಸಮಾನತೆಯು ತೀವ್ರವಾಗುತ್ತಲೇ ಬಂದಿದೆ.

"ಸಮುದಾಯ ಅನುಸರಿಸುತ್ತಿರುವ ಆರ್ಥಿಕ ಚಟುವಟಿಕೆಗಳು ಮಾನವನ ಶ್ರಮ ಸಂಪತ್ತಿನ ಬಳಕೆ ಸಂಪನ್ಮೂಲಗಳ ಪಾತ್ರ ಜನಸಂಖ್ಯೆ ಶಿಕ್ಷಣದ ಪಾತ್ರ ಪ್ರಭಾವ ಕೌಟುಂಬಿಕ ಜೀವನದಲ್ಲಿನ ಆವರ್ತಗಳು ಉದ್ಯೋಗಗಳ ಹಂಚಿಕೆಯಿಂದ ಬದಲಾಗುತ್ತಿರುವ ಸಮಾಜದಲ್ಲಿ ನಿರ್ಮಿಸಿಕೊಂಡಿರುವ ರೀತಿ, ನೀತಿ ತಿಳಿಯುವುದಾಗಿದೆ."[1] ಹೀಗೆ ಸಮುದಾಯದ ಜೀವನ ವಿಧಾನದಲ್ಲಿ ಆರ್ಥಿಕತೆ ಎಂಬುದು ತುಂಬಾ ಮಹತ್ವದ ಪಾತ್ರವಹಿಸುತ್ತದೆ. ಈ ಎಲ್ಲಾ ಬದಲಾವಣೆಗಳಿಂದ ಸಾಂಸ್ಕೃತಿಕ ಅಂಶಗಳಾದ ಸಾಮಾಜಿಕ ರಾಜಕೀಯ ಧಾರ್ಮಿಕ ರೀತಿ ನೀತಿಗಳಲ್ಲಿನ ಬದಲಾವಣೆಗಳು ಆರ್ಥಿಕ ವ್ಯವಸ್ಥೆಯ ಆಧಾರದ ಮೇಲೆಯೇ ನಿರ್ಧಾರವಾಗುತ್ತದೆ.

ಒಂದು ಸಮುದಾಯದ ಸರ್ವಾಂಗೀಣ ಆಶಯಗಳು ರೂಪಗೊಳ್ಳುವುದು. ಆರ್ಥಿಕವಾಗಿ ಆ ಸಮುದಾಯ ಯಾವ ಸ್ಥಿತಿಯಲ್ಲಿದೆ ಎಂಬುದನ್ನು ಆಧರಿಸಿರುತ್ತದೆ. ಭಾರತದಂತಹ ಸಂಪ್ರದಾಯಶೀಲ ಸಮಾಜದಲ್ಲಿ ಸಮುದಾಯವೊಂದರ ವರ್ತಮಾನದ ಸ್ಥಿತಿಗತಿಗಳಿಗೆ 'ನಿನ್ನೆಗಳಲ್ಲಿ' ಕಾರಣಗಳಿರುತ್ತವೆ. ಆದ್ದರಿಂದ ಸಮುದಾಯವೊಂದರ ಈವತ್ತಿನ ಸ್ಥಿತಿಗತಿಗಳನ್ನು ಅರ್ಥಮಾಡಿಕೊಳ್ಳಲು, ಅದರ ಆರ್ಥಿಕ ಚಟುವಟಿಕೆಗಳ ಚಾರಿತ್ರಿಕ ರೂಪಾಂತರಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಪ್ರಸ್ತುತ ಸಂಪ್ರಬಂಧದಲ್ಲಿ ಡೊಂಬರ ಸಮುದಾಯದ ಉತ್ಪಾದನಾ ಚಟುವಟಿಕೆಗಳ ಚಾರಿತ್ರಿಕ ರೂಪಾಂತರಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ. ಜನತಂತ್ರ ರಾಜಕೀಯ ವ್ಯವಸ್ಥೆಯಲ್ಲಿ ದೇಶದ ಒಟ್ಟು ಉತ್ಪನ್ನದ ಸಮಾನ ಹಂಚಿಕೆಯ ಸಾಂವಿಧಾನಿಕ ಆಶಯಗಳ ಕೇವಲ ಆಶಯಗಳೇ ಆಗಿ ಉಳಿದುಕೊಂಡಿರುವ ಈ ಸಂದರ್ಭದಲ್ಲಿ, ಅಲೆಮಾರಿಗಳ ಅಧ್ಯಯನವು ಹಲವು ಸವಾಲುಗಳಿಗೆ ಮುಖಾಮುಖಿಯಾಗಬೇಕಾಗುತ್ತದೆ. ಇದು ಶೈಕ್ಷಣಿಕ ಸಮಸ್ಯೆಯೂ ಹೌದು ಮತ್ತು ಪ್ರತಿ ಸಂಘರ್ಷವನ್ನು ರೂಪಿಸುವ ರಾಜಕೀಯ ಸಮಸ್ಯೆಯೂ ಹೌದು.

'ಒಂದು ಸಮುದಾಯದ ಬದುಕಿನ ಎಲ್ಲ ವಿವರಗಳು ರೂಪಗೊಳ್ಳುವುದು. ಆ ಸಮುದಾಯ ಯಾವ ಬಗೆಯ ಉತ್ಪಾದನಾ ಚಟುವಟಿಕೆಯಲ್ಲಿ ಪಾಲ್ಗೊಂಡಿದೆ ಎಂಬುದನ್ನು ಅವಲಂಬಿಸಿದೆ. ಅಂದರೆ ಆರ್ಥಿಕ ಚಟುವಟಿಕೆಗಳು ಸಮುದಾಯವೊಂದರ ಬದುಕಿನ ಗತಿಯನ್ನು ನಿರ್ದೇಶಿಸುತ್ತವೆ. ನಾವು ಇಂದು ಗುರುತಿಸುವ ಪ್ರತಿಯೊಂದು ಸಾಂಸ್ಕೃತಿಕ ಘಟಕವು ತನ್ನ ಅನನ್ಯತೆಯನ್ನು ಉಳಿಸಿಕೊಂಡಿರುವುದು, ತನ್ನ ಉತ್ಪಾದನಾ ಚಟುವಟಿಕೆಯ ಮೇಲೆಯೇ ಒಂದು ಸಮುದಾಯದ ಅಧ್ಯಯನವೆಂದರೆ ಅದರ ಆರ್ಥಿಕ ಚಟುವಟಿಕೆಗಳ ರೂಪಾಂತರಗಳ ಅಧ್ಯಯನವೇ ಆಗಿದೆ.'

"ಡೊಂಬರ ಸಮುದಾಯವು ಸುಮಾರು ವರ್ಷಗಳ ಹಿಂದೆ ಅಲೆಮಾರಿ ಜೀವನ ನಡೆಸುತ್ತಿತ್ತು. ಸಾಂಪ್ರದಾಯ ಮೂಲವೃತ್ತಿಯಾದ ಡೊಂಬರಾಟ ಆಡುವುದೇ ಇವರ ಕಸಬಾಗಿತ್ತು."[2] ಪ್ರಸ್ತುತ ಸಂದರ್ಭದಲ್ಲಿ ಡೊಂಬರು ಅಲೆಮಾರಿ ಜೀವನಕ್ಕೆ ಶರಣು ಹೇಳಿ ಒಂದೇ ಕಡೆ ನೆಲೆನಿಂತು ಜೀವನ

ನಡೆಸುತ್ತಿದ್ದಾರೆ. ಸಾಮಾಜಿಕ ಕೀಳಿರಿಮೆಗೆ ಕಾರಣವಾದ ತಮ್ಮ ಡೊಂಬರಾಟವನ್ನು ಬಿಟ್ಟು ಬಿಟ್ಟಿದ್ದಾರೆ. ಈಗ ಹಲವೆಡೆ ವಿರಳವಾಗಿ ವಾಸಿಸುತ್ತಾ, ಚಿಕ್ಕಪುಟ್ಟ ವ್ಯಾಪಾರಗಳನ್ನು, ಹಳ್ಳಿಗಳಲ್ಲಿ ಕೃಷಿಕೂಲಿಯನ್ನು ಅವಲಂಬಿಸಿ ಬದುಕುತ್ತಿದ್ದಾರೆ. ಇನ್ನೂ ಕೆಲವೆಡೆ ಕೆಲವು ಕರಕುಶಲ ಕಲೆಗಳನ್ನು ಅವಲಂಬಿಸಿ ಬದುಕುತ್ತಿದ್ದಾರೆ. ಆದರೆ ಸಂಪ್ರದಾಯಿಕ ವೃತ್ತಿಯನ್ನು ಕಳಚಿಕೊಂಡ ಮೇಲಂತೂ ಜೀವನ ತುಂಬಾ ಅತಂತ್ರವಾಗಿದೆ. ಆದರೆ ಡೊಂಬರ ಆರ್ಥಿಕ ಚಟುವಟಿಕೆಗಳು ಕಾಲದ ರೂಪಾಂತರಗಳಿಗೆ ಅನಗುಣವಾಗಿ ಬದಲಾಗುತ್ತಲೇ ಬಂದಿವೆ. ಈ ಬದಲಾವಣೆಗಳು ಅವರ ಸಾಮಾಜಿಕ ಸಂಬಂಧಗಳಲ್ಲೂ ಅನೇಕ ಸ್ಥಿತ್ಯಂತರಗಳಿಗೆ ಕಾರಣವಾಗಿವೆ.

ಡೊಂಬರ ಸಮುದಾಯವು ಜನಸಂಖ್ಯೆಯ ದೃಷ್ಟಿಯಿಂದ ಅಲ್ಪಸಂಖ್ಯಾತವಾಗಿದೆ. ಇಂಥಹ ಅಲ್ಪಸಂಖ್ಯಾತ ಸಮುದಾಯದ ಮೇಲೆ ಇತರೆ ಸಮೀಪವರ್ತಿ ಬಹುಸಂಖ್ಯಾತ ಸಮುದಾಯಗಳು ರಾಜಕೀಯವಾಗಿ, ಆರ್ಥಿಕವಾಗಿ ಮೀಸಲಾತಿಗೆ ಸಂಬಂಧಿಸಿದಂತೆ, ಇನ್ನೂ ಮುಂತಾದ ವಿಷಯಗಳ ಬಹುಸಂಖ್ಯಾತರು ಸಹಜವಾಗಿ ತೋಳ್ಬಲವನ್ನು ಪ್ರದರ್ಶಿಸುತ್ತಲೇ ಬಂದಿದ್ದಾರೆ. ಇಲ್ಲವೆ ಬಹುಸಂಖ್ಯಾತರಿಗೆ ಸಹಜವಾಗಿ ದತ್ತವಾದ ಸಮಾಜಿಕ ಅಧಿಕಾರಗಳು ಅಲ್ಪಸಂಖ್ಯಾತರ ಮೇಲೆ ಹೇರಲ್ಪಡುತ್ತವೆ.

ಬದಲಾಗುತ್ತಿರುವ ಸಂದರ್ಭದಲ್ಲಿ ಡೊಂಬರ ಸಾಮಾಜಿಕ ಆರ್ಥಿಕ ರೂಪಾಂತರಗಳ ಸ್ವರೂಪವೇನು? ಈ ಸಮುದಾಯದ ಒಟ್ಟು ಜೀವನ ಕ್ರಮದಲ್ಲಾದ ರೂಪಾಂತರಗಳೇನು? ವರ್ತಮಾನದಲ್ಲಿ ಈ ಸಮುದಾಯದ ಸಾಮಾಜಿಕ ಆರ್ಥಿಕ ಚಟುವಟಿಕೆಗಳಲ್ಲಾದ ಸ್ಥಿತ್ಯಂತರಗಳಿಗೆ ಕಾರಣಗಳೇನು? ಇನ್ನು ಪ್ರಮುಖ ಪ್ರಶ್ನೆಗಳನ್ನು ಇಲ್ಲಿ ಎತ್ತಿಕೊಳ್ಳಲಾಗುವುದು. ಅಲೆಮಾರಿ ಸಮುದಾಯವೊಂದು ವರ್ತಮಾನದ ಸಂದಿಗ್ಧದಲ್ಲಿ ಹೇಗೆ ದೈನಂದಿನ ಬದುಕಿಗೆ ಮುಖಾಮುಖಿಯಾಗುತ್ತದೆ ಎಂಬುದನ್ನು ಅಧ್ಯಯನ ಮಾಡುವುದು ಮತ್ತು ಈವತ್ತಿನ ಸಂದರ್ಭದಲ್ಲಿ ಈ ಸಮುದಾಯಗಳ ಸಾಮಾಜಿಕ ಮತ್ತು ರಾಜಕೀಯ ನಿಲುವುಗಳೇನು ಎಂಬುದನ್ನು ಕಂಡುಕೊಳ್ಳವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಇದು ಬಳ್ಳಾರಿ ಜಿಲ್ಲೆಯ ಡೊಂಬರ ಸಮುದಾಯವನ್ನು ಕುರಿತು ಅಧ್ಯಯನವಾಗಿದೆ. ಮೂಲತಃ ಅಲೆಮಾರಿ ಸಮುದಾಯವಾದ ಡೊಂಬರು ಇಂದು ಸಂಡೂರು, ಸಿರುಗುಪ್ಪ, ಬಳ್ಳಾರಿ, ಹೊಸಪೇಟೆ, ಕೂಡ್ಲಿಗಿ ತಾಲೂಕಿನ ವ್ಯಾಪ್ತಿಯಲ್ಲಿ ವಾಸಿಸುತ್ತಿದ್ದಾರೆ. ಕೂಡ್ಲಿಗಿ ತಾಲೂಕಿನ ಮರಬನಹಳ್ಳಿ ಎ. ದಿಬ್ಬದಹಳ್ಳಿ, ನಾಗರಹುಣಿಸಿ, ಹಾಗೂ ನರಸಾಪುರ, ಚಿಕ್ಕಜೋಗಿಯಹಳ್ಳಿ ಸಮೀಪದಲ್ಲಿರುವ ಡೊಂಬರಹಟ್ಟಿ (ಕರ್‍ನಾರಹಟ್ಟಿ) ಈ ಭಾಗದಲ್ಲಿ ಡೊಂಬರು ಅಧಿಕ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಸಂಡೂರು

ತಾಲೂಕಿನಲ್ಲಿ ಸಂಡೂರು ಸೋವೇನಹಳ್ಳಿಯಲ್ಲಿ ಹಾಗೂ ಬಳ್ಳಾರಿಯಲ್ಲಿ ಮತ್ತು ಸಿರುಗುಪ್ಪ ತಾಲೂಕಿನಲ್ಲಿ ಬರುವ ಬೂದುಗುಪ್ಪ ಗ್ರಾಮಗಳಲ್ಲಿ ಡೊಂಬರು ವಿರಳವಾಗಿ ವಾಸಿಸುತ್ತಿದ್ದಾರೆ. ಆದರೆ ಈ ಎಲ್ಲ ಪ್ರದೇಶಗಳಲ್ಲೂ ಡೊಂಬರು ಅಲ್ಪಸಂಖ್ಯಾತರು. ಇವರು ವಾಸಿಸುವ ಪ್ರತಿಗ್ರಾಮದಲ್ಲೂ ಡೊಂಬರು ಬಹುಸಂಖ್ಯಾತ ಸಮುದಾಯಗಳನ್ನು ಅವಲಂಬಿಸಿಯೇ ಬದುಕುವ ಅನಿವಾರ್ಯತೆ ಇದೆ. ಈ ಐದು ತಾಲೂಕಿನ ಗ್ರಾಮದಲ್ಲಿ ವಾಸಿಸುತ್ತಿರುವ ಡೊಂಬರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ಅಧ್ಯಯನಕ್ಕೊಳ ಪಡಿಸಲಾಗುವುದು.

## ಅಧ್ಯಯನದ ವಿಧಾನ

ಇದು ಮೂಲತಃ ಕ್ಷೇತ್ರಕಾರ್ಯಾಧಾರಿತ ಅಧ್ಯಯನವಾಗಿದೆ. ಕ್ಷೇತ್ರಮಾಹಿತಿಯನ್ನು ಪ್ರಧಾನ ಆಕರವಾಗಿ ಇಲ್ಲಿ ಪರಿಗಣಿಸಲಾಗುವುದು. ಅತ್ಯಂತ ಅಲ್ಪಸಂಖ್ಯಾತರಾಗಿರುವ ಡೊಂಬರ ಸಮುದಾಯದ ಬಗೆಗೆ ನನಗೆ ಅಪಾರ ಪ್ರೀತಿ, ಮಮತೆ, ಕಳಕಳಿಯಿದೆ. ಈ ಸಮುದಾಯದ ಡೊಂಬರ ಬದುಕಿನ ಸಮಗ್ರ ವಿವರಗಳನ್ನು ದಾಖಲಿಸಲು ಇಲ್ಲಿ ಯತ್ನಿಸಲಾಗಿದೆ. ಆದರೆ ನಾನು ಅವರ ಆರ್ಥಿಕ ಮತ್ತು ಸಾಮಾಜಿಕ ಚಟುವಟಿಕೆಗಳನ್ನು ಚರ್ಚೆಗೊಳಪಡಿಸುವುದೇ ನನ್ನ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಈ ಮೊದಲು ಇಲ್ಲಿಯುವರಿಗೆ ನಡೆದ ಅಧ್ಯಯನಗಳನ್ನು ಅವಲೋಕಿಸಲಾಗುವುದು. ವಿಶೇಷವಾಗಿ ತಯಾರಿಸಲಾದ ಪ್ರಶ್ನಾವಳಿಗಳು ಮೂಲಕ ಪ್ರತಿಯೊಂದು ಕುಟುಂಬದ ವಿವರಗಳನ್ನು ಆ ಕುಟುಂಬದ ಹಿರಿಯ ಮುಖ್ಯಸ್ಥರನ್ನು ನೇರ ಸಂದರ್ಶನ ಮಾಡುವುದರ ಮೂಲಕ ಮಾಹಿತಿಯನ್ನು ಮಾಡಲಾಗಿದೆ. ಸಮುದಾಯದ ಹಿರಿಯ ಮುಖಂಡರನ್ನೆಲ್ಲಾ ಒಂದೆಡೆ ಸೇರಿಸಿ ಸಮುದಾಯವು ಪ್ರಸ್ತುತ ಸಂದರ್ಭದಲ್ಲಿ ಎದುರಿಸುತ್ತಿರುವ ಸಮಸ್ಯೆಗಳ ಕುರಿತು ಅವರೊಡನೆ ಮುಖಾಮುಖಿ ಸಂದರ್ಶನ ಮಾಡಲಾಗಿದೆ. ಸಮುದಾಯದ ವಿದ್ಯಾವಂತರನ್ನು ನೌಕರರನ್ನು ಮತ್ತು ಈ ಸಮುದಾಯದ ಬಗ್ಗೆ ಅಪಾರ ಕಾಳಜಿ ಉಳ್ಳವರೊಡನೆ ಸಮುದಾಯದ ಆರ್ಥಿಕ ಸಮಾಜಿಕ ರಾಜಕೀಯ ಹೀಗೆ ಮುಂತಾದ ಹತ್ತು ಹಲವಾರು ವಿಷಯಗಳನ್ನು ಕುರಿತು ಅವರೊಡನೆ ಚರ್ಚಿಸಿದ್ದೇನೆ.

ಕ್ಷೇತ್ರಕಾರ್ಯಕ್ಕೆ ಹೋಗುವ ಮೊದಲು ಒಂದು ಪ್ರಶ್ನಾವಳಿಯನ್ನು ತಯಾರಿಸಿಕೊಂಡು ಪ್ರತಿ ತಾಲೂಕಿನ ಎಲ್ಲ ಗ್ರಾಮಗಳಲ್ಲಿ ವಾಸಿಸುವ ಡೊಂಬರ ಮನೆಮನೆಗೆ ಹೋಗಿ ಮಾಹಿತಿಯನ್ನು ಪಡೆಯಲಾಗಿದೆ. ಅಲ್ಲದೆ ಸಮುದಾಯದ ಹಿರಿಯರ ಜೊತೆ ಹಲವು ಸಮಸ್ಯೆಗಳ ಕುರಿತು ಸುದೀರ್ಘವಾಗಿ ಚರ್ಚಿಸಲಾಗಿದೆ. ನನ್ನ ಅಧ್ಯಯನದ ಕಿರುಅವಧಿಯಲ್ಲಿ ಡೊಂಬರ ಸಮುದಾಯುದ ಜೊತೆ ನಿಕಟ ಸಂಪರ್ಕ ಇಟ್ಟುಕೊಂಡು ಅವರ ಕಷ್ಟಸುಖಗಳನ್ನು ಇಲ್ಲಿ ದಾಖಲಿಸಲೆತ್ನಿಸಿದ್ದೇನೆ. ಈ ತಾಲೂಕುಗಳಲ್ಲಿ ಎರಡು ಸಲ ಕ್ಷೇತ್ರಕಾರ್ಯ ಮಾಡಲಾಗಿದೆ. ದಾಖಲಿಸಿಕೊಂಡ ವಿವರಗಳನ್ನು ಅಧಿಕೃತವೆಂದು ಖಚಿತಪಡಿಸಿಕೊಳ್ಳಲಾಗಿದೆ.

□□

## ಟಿಪ್ಪಣಿಗಳು

೧. ಡೊಂಬರ ಸಂಸ್ಕೃತಿ, ಡಾ.ದೇವೇಂದ್ರಕುಮಾರ್ ಹಕಾರಿ. ಪು.೪

೨. ಡೊಂಬರ ಸಂಸ್ಕೃತಿ, ಡಾ.ದೇವೇಂದ್ರಕುಮಾರ್ ಹಕಾರಿ. ಅದೇ ಪು.೪

೩. ಡೊಂಬರ ಸಂಸ್ಕೃತಿ, ಡಾ.ದೇವೇಂದ್ರಕುಮಾರ್ ಹಕಾರಿ. ಪು.೨

೪. ಡೊಂಬರ ಸಂಸ್ಕೃತಿ, ಡಾ.ದೇವೇಂದ್ರಕುಮಾರ್ ಹಕಾರಿ ಪು.೩ ಮತ್ತು ೪

೫. ರಾಜಕೀಯ ಸಿದ್ಧಾಂತ ಎಸ್.ಎನ್.ರಾವ್. ಪು.೨೭

೬. ಆಧುನಿಕ ಭಾರತದ ಅರ್ಥವ್ಯವಸ್ಥೆ ಕೆ.ಡಿ.ಬಸವ. ಪು.೮೩

೭. H.V. Nanjundiah and Anntha Krisha Iyer, The mysore Tribes and casts vol: 3rd, page:140

ಅಧ್ಯಾಯ ೨

# ಡೊಂಬರ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು

## ಪೀಠಿಕೆ

ಮನುಷ್ಯನ ಆರ್ಥಿಕ ಚಟುವಟಿಕೆ ಆತನ ಬದುಕಿನ ನಿರ್ಮಾಣದಲ್ಲಿ ಅಪೂರ್ವವಾದ ಪಾತ್ರವಹಿಸುತ್ತದೆ. ಹುಟ್ಟಿನಿಂದ ಇಲ್ಲಿಯವರೆಗೆ ಈ ಮಾನವಜೀವಿ ಹಲವು ಬಗೆಯ ಆರ್ಥಿಕ ಚಟುವಟಿಕೆಯ ಹಂತಗಳನ್ನು ದಾಟಿ ಬಂದಿದ್ದಾನೆ. ಎಲ್ಲಾ ಹಂತಗಳಲ್ಲೂ ತನ್ನ ಬದುಕನ್ನು ನಿರ್ಮಾಣ ಮಾಡುವ ಉತ್ಪಾದನಾ ಚಟುವಟಿಕೆಗಳನ್ನು ಕಟ್ಟಿಕೊಳ್ಳುತ್ತಲೇ ಬಂದಿದ್ದಾನೆ. ಆರಂಭದಲ್ಲಿ ಆಹಾರ ಉತ್ಪಾದನೆಯೇ ಅವನ ಮುಖ್ಯ ಕಾಳಜಿಯಾಗಿತ್ತು. ಇದಕ್ಕಾಗಿ ಮನುಷ್ಯ ರೂಪಿಸಿಕೊಂಡ ಉತ್ಪಾದನಾ ಸಾಧನೆಗಳ ಚರಿತ್ರೆಯೇ ಕುತೂಹಲಕಾರಿಯಾದದ್ದು, ಈ ಚಟುವಟಿಕೆಯೇ ಅವನ ಅವನ ಆಲೋಚನೆಯನ್ನು ರೂಪಿಸಿತು. ಇತರ ಪ್ರಾಣಿಗಳಿಗಿಂತ ಬದುಕನ್ನು ಭಿನ್ನವಾಗಿ ಕಟ್ಟಿಕೊಳ್ಳುವಂತೆ, ಮನುಷ್ಯನನ್ನು ಪ್ರೇರೇಪಿಸಿತು. ತನ್ನ ಬದುಕನ್ನು ನಿರ್ಮಾಣ ಮಾಡುವ ಉತ್ಪಾದನಾ ಚಟುವಟಿಕೆಗಳನ್ನು ಕಟ್ಟಿಕೊಳ್ಳುತ್ತಲೇ ಬಂದಿದ್ದಾನೆ. ಆರಂಭದಲ್ಲಿ ಉತ್ಪಾದನೆಯೇ ಇತರ ಪ್ರಾಣಿಗಳಿಗಿಂತ ಬದುಕನ್ನು ಭಿನ್ನವಾಗಿ ಕಟ್ಟಿಕೊಳ್ಳುವಂತೆ ಮನುಷ್ಯನನ್ನು ಪ್ರೇರೇಪಿಸಿತು.

ಭಾರತದ ಜಾತ್ಯಾತೀತ ವ್ಯವಸ್ಥೆಯಲ್ಲಿ ಎಲ್ಲಾ ಪ್ರಜೆಗಳು ಸಮಾನರಾಗಿದ್ದಾರೆ ಆದರೆ ಸಮಕಾಲೀನ ಭಾರತೀಯ ಸಮಾಜವನ್ನೂ ತನ್ನ ಉಚ್ಚ ನೀಚ ಮೇಲ್ಜಾತಿ, ಕೆಳಜಾತಿ ಎಂಬ ತಾರತಮ್ಯ ಭಾವದ ನೆಲೆಯನ್ನು ದಾಟಿ ಹೊಸ ಸಾಮಾಜಿಕ ಮೌಲ್ಯಗಳನ್ನು ಮೈಗೂಡಿಸಿಕೊಂಡಿಲ್ಲ. ಹೀಗಾಗಿ "ಹಿಂದೂ ಸಮಾಜವು ಭಾವನಾತ್ಮಕ ಮಟ್ಟದಲ್ಲಿ ಇನ್ನು ಒಡಕು ಒಡಕಾಗಿಯೇ ಇದೆ. ಭಾರತೀಯ ಸಮಾಜದ ಪ್ರಮುಖ ಅಂಗವಾದ ಹಿಂದೂ ವ್ಯವಸ್ಥೆಯು ಉಳಿದ ಸಾಮಾಜಿಕ ಸಮುದಾಯಗಳೊಂದಿಗೆ ಏಕೀಕೃತ ಅಖಂಡ ಭಾರತೀಯ ಸಮಾಜವನ್ನು ಸೃಷ್ಟಿಸುವಲ್ಲಿ ವಿಫಲವಾಗಿದೆ."[೧]

ಭಾರತೀಯ ಸಮಾಜದ ಈ ಮೂಲಭೂತ ದೌರ್ಬಲ್ಯ ಎಲ್ಲಾ ಚಿಂತನಪರರನ್ನು ಸದಾ ಕಾಡುತ್ತಿರುವ ಒಂದು ಅಸಹ್ಯ ಸಂಗತಿಯಾಗಿದೆ. ಪರಿಶಿಷ್ಟಜಾತಿ ಮತ್ತು ಸವರ್ಣೀಯ ಹಿಂದೂಗಳ

ನಡುವಿನ ಬೇದ ಭಿನ್ನತೆ ತೊಲಗಿ ಅವರೆಲ್ಲಾರಿಂದೊಡಗೂಡಿದ ಒಂದು ಅಖಂಡ ಸಮಾಜ ಅಸ್ತಿತ್ವಕ್ಕೆ ಬರಬೇಕೆನ್ನುವುದೇ ನಮ್ಮೆಲ್ಲರ ವಾದ ಜಿಜ್ಞಾಸೆಯ ಅಂತಿಮ ಗುರಿಯಾಗಿರಬೇಕು. ವಿಭಿನ್ನ ಸಾಮಾಜಿಕ ತುಡಿತಗಳ ನಡುವಿನ ಜಿರುಕು ಮಾಯುವಾಗಿ ಸಂಪತ್ತಿನ ಸಮಾನ ವಿತರಣೆಯಾಗಬೇಕಿದೆ.

ಡೊಂಬರ ಸಮಸ್ಯೆಯ ಬೇರು ಮಾತ್ರ ನಮ್ಮ ಸಮಾಜದ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯ ರಚನೆಯಲ್ಲಿಯೇ ಇದೆ ಎಂಬುದು ವಾದಾತೀತ. ಅವುಗಳಿಗೆ, ಪರಿಹಾರಗಳನ್ನು ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯ ಇಡೀ ಚೌಕಟ್ಟನ್ನು ಆಮೂಲಾಗ್ರವಾಗಿ ಪುನರ್ ಸಂಘಟಿಸುವುದರಲ್ಲಿ ಕಂಡುಕೊಳ್ಳಬೇಕು.

ಭಾರತದ ಸಮಾಜದ ಚಾರಿತ್ರಿಕ ಬೆಳವಣಿಗೆಯ ಉದ್ದಕ್ಕೂ ಡೊಂಬರು ಅನೇಕ ರೂಪಾಂತರಗಳನ್ನು ಹಾದು ಬಂದಿದ್ದಾರೆ. ಪ್ರದರ್ಶನಾತ್ಮಕ ಕಲೆಯನ್ನೇ ನೆಚ್ಚಿಕೊಂಡು ಆಳುವ ವರ್ಗದ ಮರ್ಜಿಯಲ್ಲಿ ಸದಾ ಬದುಕುತ್ತಾ, ನಿಶ್ಚಿತ ಆರ್ಥಿಕ ಮೂಲಗಳಿಲ್ಲದೆ ಈ ಸಮುದಾಯ ಅಲೆಮಾರಿಯಾಗಿಯೇ ಉಳಿಯಿತು. ಭಾರತದ ಕೆಳಜಾತಿ ಸಮುದಾಯಗಳು ಆಳುವ ವರ್ಗದ ಅಡಿಯಲ್ಲಿ ಯಾವ ಯಾವ ಬಗೆಗಳಲ್ಲಿ ತಮ್ಮನ್ನು ರೂಪಿಸಿಕೊಂಡವೋ, ಡೊಂಬರೂ ಸಹ ಈ ಅಸಮಾನ ಸಮಾಜದಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದ್ದಾರೆ. ಜಾತಿ ಆಧಾರಿತ ಈ ಸಮಾಜದಲ್ಲಿ ಹೆಚ್ಚು ಆದಾಯ ತರುವ ಮೂಲಗಳು ಮೇಲ್ಜಾತಿಗಳ ವಶವಾದ ಮೇಲೆ, ಕೆಳಜಾತಿಗಳು ಅತಂತ್ರಗೊಂಡವು. ಯಾವತ್ತೂ ಅಧೀನ ಸಮುದಾಯ ಗಳಾಗಿಯೇ ಬದುಕಿಬಂದವು. ಭಾರತದಲ್ಲಿ ಪ್ರಭುತ್ವಗಳು ಬದಲಾದಂತೆ, ದುಡಿವ ವರ್ಗಗಳ ಬದುಕುಗಳಲ್ಲೂ ಅನೇಕ ಬದಲಾವಣೆಗಳು ಆಗುತ್ತಲೇ ಬಂದಿವೆ. ಡೊಂಬರ ಬದುಕಲ್ಲಿ ಹಂತಹಂತವಾಗಿ ಆದ ರೂಪಾಂತರಗಳನ್ನು ಈ ಅಧ್ಯಾಯದಲ್ಲಿ ವಿವರಿಸಲು ಯತ್ನಿಸಲಾಗಿದೆ.

ಇಂಡಿಯಾದ ಶ್ರೇಣಿಕೃತ ಜಾತಿವ್ಯವಸ್ಥೆಯಿಂದಾಚೆಗೆ ಉಳಿದುಕೊಂಡು ತಮ್ಮದೇ ಆದ ಸಂಸ್ಕೃತಿ, ಭಾಷೆ, ರೂಢಿ ಸಂಪ್ರದಾಯಗಳನ್ನು ಆಚಾರ ವಿಚಾರಗಳನ್ನು ಕಟ್ಟಿಕೊಂಡರು. ಹೀಗಾಗಿ ಸಮುದಾಯವು ತನ್ನದೇ ಆದ ರೀತಿಯಲ್ಲಿ ತಾವು ಜೀವಿಸುತ್ತಾ ಬಂದಿತು. ಡೊಂಬರ ಸಮಾಜದಲ್ಲಿ, ಆ ಸಮುದಾಯದ ಒಬ್ಬ ಹಿರಿಯ ವ್ಯಕ್ತಿ ನಾಯಕನಾಗಿರುತ್ತಿದ್ದನು. ಈತನ ಮಾತಿನಂತೆ ಎಲ್ಲಾರೂ ನಡೆದುಕೊಳ್ಳಬೇಕು ಇವರಲ್ಲಿಯೇ ಏನಾದರೂ ಕಲಹವೇರ್ಪಟ್ಟರೆ, ಇವರಲ್ಲಿನ ಕುಂದು ಕೊರತೆಗಳನ್ನು ಆತ ಸಮುದಾಯದ ಚೌಕಟ್ಟಿನೊಳಗೆ ಬಗೆಹರಿಸುತ್ತಿದ್ದನು.

"ಅಂದು ಇವರ ಆರ್ಥಿಕ ಪ್ರಮುಖ ಮೂಲವೆಂದರೆ ಸರ್ಕಸ್ ಅಥವಾ ಡೊಂಬರಾಟವಾಗಿತ್ತು. ಈ ವೃತ್ತಿಯಿಂದ ಬಂದ ಹಣದಿಂದಲೇ ಜೀವನ ಸಾಗಿಸಬೇಕಾಗಿತ್ತು. ಇತರೆ ಯಾವುದೇ ಮೂಲಗಳಿಂದ ಇವರಿಗೆ ಆದಾಯ ಬರುತ್ತಿರಲಿಲ್ಲ. ಗುಂಪು ಜೀವನ ಇವರಿಗೆ ತುಂಬಾ ಇಷ್ಟವಾಗಿತ್ತು."[೨] ಡೊಂಬರಾಟ

ಮೂಲತಃ ಒಂದು ತಂಡದ ಸಾಮುದಾಯಿಕ ಪ್ರದರ್ಶನ. ಆದ್ದರಿಂದಲೇ ಒಂದು ಗುಂಪು ಡೊಂಬರಾಟಕ್ಕಾಗಿಯೇ ಒಂದಾಗಿರುತ್ತಿತ್ತು. ಡೊಂಬರು ಸಹ ಇಂದು ಸಮಾಜಿಕವಾಗಿ ಕೆಳಸ್ಥರದಲ್ಲಿಯೇ ಉಳಿದಿದ್ದಾರೆ. ಡೊಂಬರಾಟ ಆಡುವವರನ್ನು ಇಂದಿನ ಸಮಾಜವು ಕೀಳಾಗಿ ಕಾಣುತ್ತದೆ. ಇದರಿಂದಾಗಿ ಡೊಂಬರು, ಡೊಂಬರಾಟದ ವೃತ್ತಿಯನ್ನೇ ಬಿಡುತ್ತಿದ್ದಾರೆ. ಹೀಗಾಗಿ ಇಂದು ಡೊಂಬರ ಆರ್ಥಿಕ ಪರಿಸ್ಥಿತಿ ತುಂಬಾ ಡೋಲಾಯಮಾನವಾಗಿದೆ, ಮತ್ತು ಶೋಚನೀಯವಾಗಿದೆ. ಆದಿಯಿಂದಲೂ ಇಂದಿನವರೆಗೂ ಶಿಕ್ಷಣದಿಂದ ವಂಚಿತರಾಗಿ ತಮ್ಮ ಸರ್ವಸ್ವವನ್ನೇ ಕಳೆದುಕೊಂಡಿದ್ದಾರೆ. ಸಮಾಜದಲ್ಲಿ ಹಸನಾದ ಬದುಕು ಕಟ್ಟಿಕೊಳ್ಳೋಣವೆಂಬ ಕಾತುರವೇನೊ ಅವರಲ್ಲಿದೆ, ಆದರೆ ತಮಗೆ ತೆರೆಮರೆಯಲ್ಲಿ ವಂಚನೆ, ಮೋಸ ಮಾಡುತ್ತಿರುವ ಇಂದಿನ ನಾಗರಿಕ ಸಮಾಜ ಮತ್ತು ಸರ್ಕಾರಗಳ ವಿರುದ್ಧ ಧ್ವನಿ ಎತ್ತುವ ಮಾತು ಅವರಲ್ಲಿ ಕನಸಾಗಿಯೇ ಉಳಿದಿದೆ.

ಇಂಡಿಯಾದ ಜಾತಿ ರಚನೆಯು ವಿಶೇಷವಾಗಿ ಕೆಲವು ನಿರ್ದಿಷ್ಟ ಜಾತಿಗಳನ್ನು ಸಮಾಜದ ಆಚೆಗೆ ದೂಡಿ ಬಹಿಷ್ಕೃತರನ್ನಾಗಿ ಮಾಡಿದ ಕ್ರಮ, ಮತ್ತು ಕೆಲವು ಜಾತಿಗಳನ್ನು ನಾಡಿನಿಂದಾಚೆಗೆ ತಳ್ಳಿ ದೂರದಿಂದ ನಿಕೃಷ್ಟವಾಗಿ ಕಂಡ ಕ್ರಮ ಆರ್ಥಿಕ ಶೋಷಣೆಯ ಅಂತಿಮ ಸಾಧನವಾಗಿದೆ. ಮತ್ತು ಇಂಥ ಆರ್ಥಿಕ ಶೋಷಣೆಗೆ ಸಾಮಾಜಿಕ ಹಾಗೂ ತಾತ್ವಿಕ ನೆಲೆಗಟ್ಟನ್ನು ಒದಗಿಸುವ ಉದ್ದೇಶದಿಂದಲೇ ಧಾರ್ಮಿಕ ಸಿದ್ಧಾಂತಗಳ ಕಟ್ಟುಕಥೆಗಳನ್ನು ಹುಟ್ಟಿಸಲಾಯಿತು. ಇದಕ್ಕೆ ಪರ್ಯಾಯವಾಗಿ ಇನ್ನೊಂದು ಸೃಷ್ಟಿಯನ್ನು ತಡೆಯಬಹುದು. ಮೂಲಭೂತವಾಗಿ ಜಾತಿ ವ್ಯವಸ್ಥೆಯು ಒಂದು ಧಾರ್ಮಿಕ ಹಾಗೂ ಸಾಮಾಜಿಕ ವಿದ್ಯಮಾನವಾಗಿದ್ದು, ಕ್ರಮಕ್ರಮೇಣ ಅದು ಆರ್ಥಿಕ ಶೋಷಣೆಯ ಅನುಕೂಲ ಸಾಧನವಾಗಿ ಮಾರ್ಪಟ್ಟಿತು. ಆದರೆ ನಾವು ಯಾವುದೇ ದೃಷ್ಟಿಯಿಂದ ನೋಡಲಿ ಅಥವಾ ಯಾವುದೇ ನಿಲುವನ್ನು ತಳೆಯಲು ಜಾತಿಯ ತಾರತಮ್ಯದ ಭಾವ ಎಲ್ಲಾ ಕಾಲಗಳಲ್ಲಿಯೇ ಆರ್ಥಿಕ ಯಜಮಾನ್ಯ ಮತ್ತು ಶೋಷಣೆಯ ಪ್ರಬಲ ಸಾಧನ ಸಲಕರಣೆಗಳಾದವು ಎಂಬ ಬದುಕಿನ ಕಟುಸತ್ಯವನ್ನು ಮಾತ್ರ ಅಲ್ಲಗಳೆಯಲಾಗದು. ಇವತ್ತಿಗೂ ಪರಿಶಿಷ್ಟಜಾತಿಗಳೆಂದರೆ ಗ್ರಾಮಾಂತರ ಕೃಷಿ ಕಾರ್ಮಿಕರ ಸಮುದಾಯ ಅಥವಾ ಹಳ್ಳಿಗಾಡಿನ ಕಸುಬುದಾರರ ಪಂಗಡಗಳೆಂದೇ ನಾವು ಭಾವಿಸುತ್ತೇವೆ. ಹೀಗಿದ್ದೂ ಅವರ ಕನಿಷ್ಟಕೂಲಿಯ ಅವಕಾಶಗಳನ್ನು ಹೆಚ್ಚಿಸುವ ಸ್ವಯಂ ಉದ್ಯೋಗಕ್ಕೆ ಹೆಚ್ಚಿನ ಆದ್ಯತೆ ಕಲ್ಪಿಸಿಕೊಡುವ ಪ್ರಯತ್ನಗಳನ್ನು ಮಾಡುವುದೇ ಇಲ್ಲ. ಅವುಗಳನ್ನು ಕುರಿತು ಯೋಜನೆಗಳನ್ನು ರೂಪಿಸುವುದಿಲ್ಲ. ಹೀಗಾಗಿ ಅವರು ನಿರಂತರವಾಗಿ ನಿಕೃಷ್ಟ ದಿನಗೂಲಿಗಳಾಗಿಯೇ ಉಳಿದುಬಿಡುತ್ತಾರೆ.

### ಅ. ಸಮಾಜದ ಚಾರಿತ್ರಿಕ ಬೆಳವಣಿಗೆ

ಆರ್ಯರು ಭಾರತಕ್ಕೆ ಕಾಲಿಡುವ ಪೂರ್ವಕಾಲದಿಂದಲೇ ಇಲ್ಲಿಯ ನಿವಾಸಿಗಳಾಗಿದ್ದ ಅನೇಕ ದ್ರಾವಿಡ ಜನಪದ ಸಮುದಾಯಗಳಲ್ಲಿ ಒಂದು ಪ್ರಮುಖ ಸಮುದಾಯ "ಡೊಂಬರ ವಿವಿಧ ಆದಿಮಾನವ

ಸಮೂಹಗಳು ಅಲೆಮಾರಿ ಬುಡಕಟ್ಟು ಕುಲಗುಂಪು, ಕೃಷಿ ವೃಂದದ ಒಂದು ಜನಸಮೂಹವಾಗಿದೆ. ನಾಗರೀಕತೆಯಿಂದ ಒಂದಷ್ಟು ದೂರವೇ ಉಳಿದು ಕತ್ತೆ, ನಾಯಿ, ಎತ್ತು ಮುಂತಾದ ಪಶುಗಳನ್ನು ಒಳಗೊಂಡು ಹೆಚ್ಚಾಗಿ ಪರಿಸರದ ಮಧ್ಯದಲ್ಲಿಯೇ ಬೆಳೆದು ಡೊಂಬರು ಒಂದು ವಿಶಿಷ್ಟ ಸಂಸ್ಕೃತಿಯ ವಾರಸುದಾರರು ಏಕೆಂದರೆ ಪರಿಸರ ಎನ್ನುವುದು ಎಲ್ಲ ಸಂಸ್ಕೃತಿಗಳ ತವರು."[೩]

ಮೂಲತಃ ಡೊಂಬರು ಕಾಡಿನಲ್ಲಿಯೇ ಚಿಕ್ಕಕೃಷಿ (ಕೆತ್ಲು ಬೇಸಾಯ)ಯನ್ನು ಮಾಡುತ್ತ ಬುಡಕಟ್ಟುಗಳಂತೆ ಜೀವನ ನಡೆಸುತ್ತಿದ್ದರು. ಹೀಗೆ ಒಂದು ರೀತಿಯಾದ ಸ್ವಚ್ಛಂದ ಜೀವನ ನಡೆಸುತ್ತಿದ್ದರು. ಹೀಗೆ ತಮ್ಮದೇ ಆದ ಸಂಸ್ಕೃತಿ, ಸಂಪ್ರದಾಯ, ಪ್ರಕೃತಿ ಆರಾಧನೆಯಲ್ಲಿ ಮಗ್ನರಾಗಿದ್ದರು. ಎಡ್ಗರ್ ಥರ್ಸ್ಟನ್ ಅವರ ಪ್ರಕಾರ "ಡೊಂಬರು ಗುಂಪು ಜೀವನ ನಡೆಸುತ್ತಿದ್ದರು. ಕಾಡಿನಲ್ಲಿದ್ದಾಗ, ಇವರ ಪ್ರಮುಖ ವೃತ್ತಿ ಕೃಷಿ ಬೇಸಾಯವಾಗಿತ್ತು. ಡೊಂಬರು ಮೃದು ಸ್ವಭಾವವುಳ್ಳ ಜನರು, ಯಾರಿಗೂ ತೊಂದರೆಯನ್ನುಂಟು ಮಾಡುವಂತರಲ್ಲ. ಈ ಜನಸಮುದಾಯವು ಗುಜರಾತ್, ಜಯಪುರ, ಆಂಧ್ರಪ್ರದೇಶ, ತಮಿಳುನಾಡು, ಕರ್ನಾಟಕ ಭಾಗಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ"[೪] ಎನ್ನುತ್ತಾರೆ.

ಮಾನವ ಮಾನವನನ್ನೇ ಹೇಗೆ ಶೋಷಿಸುತ್ತಾ ಬಂದ ಅದೊಂದು ಕುತುಹಲಕಾರಿಯ ಸಂಗತಿಯೇ ಆಗಿದೆ. ಭಾರತದ ಸ್ವಾರ್ಥಪರ ಬುದ್ಧಿಜೀವಿಗಳ ವರ್ಗವು ತಮ್ಮ ಐಷಾರಾಮ ಜೀವನಕ್ಕೆ ಸಹಾಕಾರಿಯಾಗುವ ಕಾನೂನುಗಳನ್ನು ರೂಪಿಸಿದರು. ಇಂಥ ಅಪಾಯಕಾರಿ ಕಾನೂನುಗಳು ಅನೇಕ ಸಮುದಾಯಗಳನ್ನು ಗುಲಾಮರನ್ನಾಗಿದವು. ಹೊಸ ಶಿಲೆಯುಗ ಕಾಲಘಟ್ಟದಲ್ಲಿ ಡೊಂಬರು ಕೃಷಿಕ ವೃಂದವಾಗಿತ್ತು. ತದನಂತರ ಅಂದರೆ ರಾಜಪ್ರಭುತ್ವ ಕಾಲಘಟ್ಟದಲ್ಲಿ ಸಾಂಸ್ಕೃತಿಕ ಪ್ರಭುತ್ವ ರೂಪಿಸಿದ್ದ ಕಾನೂನುಗಳಿಂದ ಜರ್ಜರಿತವಾದ ಡೊಂಬರಿಂದ ಕೃಷಿಯನ್ನು ಮೇಲುವರ್ಗದವರು ತಮ್ಮ ಕೈವಶ ಮಾಡಿಕೊಂಡರು. ಹೀಗೆ ಕೃಷಿಬೇಸಾಯವು ತಮ್ಮ ಕೈಯಿಂದ ಜಾರಿದಾಗ ಹೊಟ್ಟೆ ಪಾಡಿಗಾಗಿ ಡೊಂಬರು ವಿಧಿಯಿಲ್ಲದೆ ತಮ್ಮ ಮೂಲ ನೆಲೆಯನ್ನು ಬಿಟ್ಟು ಅಲೆಮಾರಿಗಳಾದರು. ಹೀಗೆ ಆರಂಭದಲ್ಲಿ ಕೆಲವು ದಿನಗಳು ಬಿದಿರಿನಿಂದ ಬುಟ್ಟಿ ಎಣೆಯುವುದನ್ನು ರೂಢಿಸಿಕೊಂಡರು. ಇದಾದನಂತರ ಡೊಂಬರು, ಯಾರ ಗುಲಾಮರಾಗದೆ ಉನ್ನತ ವರ್ಗದವರ ಕೈಕೆಳಗೆ ದುಡಿಯದೇ ಸರ್ಕಸ್ ಆಡುವುದನ್ನು ಮೈಗೂಡಿಸಿಕೊಂಡರು. ಈ ಸರ್ಕಸ್ ಜನರು ಡೊಂಬರಾಟ ಎಂದು ಪ್ರಸಿದ್ಧಿಯಾಯಿತು.

"ಡೊಂಬಗೆ ನೆಲೆ ಇಲ್ಲ, ಡಂಬಿಗಿ ಬೆಲೆ ಇಲ್ಲ. ಇದು ಡೊಂಬರಿಗೆ ಸಂಬಂಧಿಸಿದ ಒಂದು ಗಾದೆ. ಈ ಗಾದೆ ಎರಡು ಅಂಶಗಳನ್ನು ಸ್ಪಷ್ಟಪಡಿಸುತ್ತದೆ. ಒಂದು ಡೊಂಬರಿಗೆ ಯಾವುದೇ ಒಂದು ಸ್ಥಿರವಾದ ನೆಲೆ ಇಲ್ಲ, ಎರಡು ಡಂಬನ್ನು ಹಣಕೊಟ್ಟು ಕೊಳ್ಳಬೇಕಾಗಿಲ್ಲ. ಡೊಂಬನಿಗೂ ಡಂಬಿಗೂ ಸಂಬಂಧ ಕಲ್ಪಿಸುವ ಈ ಗಾದೆಯಲ್ಲಿ ಮತ್ತೆ ಕೆಲವು ಸಂಗತಿಗಳು ಹುದುಗಿವೆ. ಎಲ್ಲಿ ನೋಡಿದಲ್ಲಿ ಕಾಲಿಟ್ಟಲ್ಲಿ

ಸಮೃದ್ಧವಾಗಿ ಬೆಳೆದ ಡಂಬಿನ ಮಳೆಗಳಿಂದ ತುಂಬಿದ ದಟ್ಟಡವಿಗಳ ಪರಿಸರವಿದ್ದ ಆ ಕಾಲದಿಂದಲೇ ಡೊಂಬರು ಭೂಪ್ರದೇಶದ ವಿವಿಧ ಭೌಗೋಳಿಕ ಪಾತಳಿಗಳಲ್ಲಿ ಕಾಣಿಸಿಕೊಂಡರು, ಮತ್ತು ಪರಿಸರ ಜಾಲದ ಕ್ರೌರ್ಯ, ಭಯಭೀತಿಗಳಿಗೆ ಜಗ್ಗದೆ ಎಲ್ಲವನ್ನೂ ಶಕ್ತಿ ಜಾಣ್ಮೆಗಳಿಂದ ತಮ್ಮ ಉಪಜೀವನ ವಿಧಾನಗಳಿಗೆ ಒಗ್ಗಿಸಿಕೊಂಡು ಸಂದರ್ಭಾನುಸಾರತಾವೂ ಒಗ್ಗಿ ಯಾವುದೇ ಪ್ರದೇಶದಲ್ಲಿ ಸ್ಥಿರವಾಗಿ ಕಾಲೂರದೇ ಅಲೆಮಾರಿಗಳಾಗಿ ಬದುಕುತ್ತಾ ಬಂದರು."[೫]

ರಾಜಾಶ್ರಯಿ ಕಾಲಘಟ್ಟದ ಡೊಂಬರಾಟಕ್ಕೆ ಅಪಾರವಾದ ಗೌರವ, ಮನ್ನಣೆ ದೊರಕಿದ್ದಿತು. ಇದಕ್ಕೆ ರಾಜಾಶ್ರಯ ಕೂಡ ದೊರಕಿತ್ತು. ಡೊಂಬರನ್ನು ಅನೇಕ ರಾಜರುಗಳು ತಮ್ಮ ಆಸ್ಥಾನಗಳಿಗೆ ಆಹ್ವಾನಿಸಿಕೊಳ್ಳುತ್ತಿದ್ದರು. ಡೊಂಬರ ಪ್ರದರ್ಶನ ಕಲೆಯಲ್ಲಿ ಒಂದಾದ ಸಂಗೀತ ನೃತ್ಯವನ್ನು ರಾಜರು ಇಷ್ಟಪಡುತ್ತಿದ್ದರು. ಡೊಂಬರನ್ನು ರಾಜ ತಮ್ಮ ಆಸ್ಥಾನದಲ್ಲಿಯೇ ಇಟ್ಟುಕೊಂಡು ತನ್ನ ಹೆಂಡತಿಯರಿಗೆ ಮತ್ತು ಮಕ್ಕಳಿಗೆ ನೃತ್ಯ ಸಂಗೀತ ಹೇಳಿಕೊಡಬೇಕು ಎಂದು ಅನೇಕ ರಾಜರುಗಳು ಅಪ್ಪಣೆ ಮಾಡಿದ್ದುಂಟು. ಡೊಂಬರಿಗಾಗಿ ಭೂಮಿ, ಮನೆ, ಹೀಗೆ ಎಲ್ಲಾ ಸೌಕರ್ಯಗಳನ್ನು ಸಹ ಕಲ್ಪಿಸಲಾಗಿತ್ತು.

ಡೊಂಬರ ಯುವತಿಯರು ಅತಿ ಸೌಂದರ್ಯವತಿಯರು, ಇವರ ಸೌಂದರ್ಯಕ್ಕೆ ಮನಸೋತು ಅನೇಕ ರಾಜರುಗಳು ಡೊಂಬರ ಯುವತಿಯರನ್ನು ಮದುವೆಯಾಗಿದ್ದಾರೆ. ಉದಾ. ಕಂಪಿಲರಾಯನು ರತ್ನಾಜಿ ಸೌಂದರ್ಯಕ್ಕೆ ಮರುಳಾಗಿ ರತ್ನಾಜಿಯನ್ನು ವಿವಾಹ ಮಾಡಿಕೊಂಡ ಸಂಗತಿ ಅನೇಕರಿಗೆ ಗೊತ್ತಿರುವಂತಹ ವಿಷಯವೇ ಆಗಿದೆ.

## ಶಿವಶರಣೆ ಡೊಂಬರ ಚೆನ್ನಿಯ ಚಾರಿತ್ರಿಕ ಹಿನ್ನೆಲೆ

ಡೊಂಬರ ಚೆನ್ನಿ ಇತಿಹಾಸ ಪ್ರಸಿದ್ದಳು. ಚೆನ್ನಬಸವೇಶ್ವರ ಪುರಾಣದಲ್ಲಿ ಚೆನ್ನಿಗೆ ಸಂಬಂಧಿಸಿದಂತೆ ಜೀವನ ಸಾಧನೆಯ ವರ್ಣನೆ "ಚೆನ್ನಿಯ ತಂದೆ ಚಾಮಯ್ಯ ಚೆನ್ನಿ ತನ್ನ ಅಲೆಮಾರಿ ಬದುಕಿನ ಸಂದರ್ಭದಲ್ಲಿ ಅನೇಕ ರಾಜರುಗಳ ಆಸ್ಥಾನಗಳಿಗೆ ಬೇಟಿ ನೀಡಿ ಡೊಂಬರಾಟ ಪ್ರದರ್ಶನ ಅದ್ಭುತವಾಗಿ ಮಾಡಿ ಆಸ್ಥಾನದ ರಾಜರುಗಳಿಂದ ಕಾಣಿಕೆ ಮತ್ತು ಸನ್ಮಾನದ ಜೊತೆಗೆ ಪ್ರಶಸ್ತಿಗಳನ್ನು ಸಹ ಪಡೆದಿದ್ದಾಳೆ."[೬]

ಹೀಗೆ "ಚೆನ್ನಿ ಮತ್ತು ತಂದೆಯಾದ ಚಾಮಯ್ಯ ಇವರು ನವಖಂಡ ಪೃಥ್ವಿಯ ಅರಸ ತ್ರಿಶಂಕನ ಆಸ್ಥಾನವನ್ನು ಸುತ್ತಿಕೊಂಡು ಮುಂದೆ ಕರಡಿ ಕಲ್ಲೆಂಪುರದಲ್ಲಿ ಜಿಲ್ಲಮ ರಾಯನೆಂಬ ಅರಸು ರಾಜ್ಯವಾಳುತ್ತಿದ್ದನು."[೭] ಈತನ ಗುರುಭಕ್ತಿ ಅಪಾರವಾದದು ಇವನು ಶೈವೋಪದೇಶವಂ ಪಡೆದು ಗುರು ಭಕ್ತಿಯಂ ಮಾಡುತ್ತಾ ಲಿಂಗಾರ್ಚನೆಯ ಮಾರ್ಗವಿಡಿದು ಗುರುಭಕ್ತಿಗೆ ತನ್ನನ್ನು ಅರ್ಪಿಸಿಕೊಂಡಿದ್ದನು.

ಹೀಗೆ ದಿನಾಲೂ ಬೆಳಿಗ್ಗೆ ಗುರುದರ್ಶನ ಮಾಡುವವರೆಗೂ ನೀರನ್ನೂ ಕೂಡ ಮುಟ್ಟುತ್ತಿರಲಿಲ್ಲವಂತೆ. ಇಂಥ ಅಗಾಧವಾದ ಗುರುಭಕ್ತಿಯನ್ನು ಅನುಸರಿಸುತ್ತಿದ್ದ ಬಲ್ಲಮರಾಜನ ಆಸ್ಥಾನಕ್ಕೆ ಡೊಂಬರ ಚೆನ್ನಿ ಬಂದು ನಮಗೆ ಡೊಂಬರಾಟ ಆಡಲು ತಮ್ಮ ಆಸ್ಥಾನದಲ್ಲಿ ಒಪ್ಪಿಗೆ ನೀಡಬೇಕು ಎಂದು ರಾಜನಿಗೆ ಭಿನ್ನವಿಸಿಕೊಳ್ಳುತ್ತಾಳೆ. ಅದಕ್ಕೆ ರಾಜನು ಒಪ್ಪಲಿಲ್ಲ. ಬದಲಾಗಿ "ಗುರುಭಕ್ತಿಯೇ ಶ್ರೇಷ್ಠವೆಂದು ಆತನು ತಿಳಿದಿದ್ದನು."[೮] ಇದರಿಂದ ಬೇಸರಗೊಂಡಿದ್ದ "ಡೊಂಬರ ಚೆನ್ನಿ ಅಲ್ಲಿಂದ ಹಂಪಿ ಮಾರ್ಗವಾಗಿ ತನ್ನ ಪ್ರಯಾಣ ಬೆಳೆಸಿದಳು."[೯]

ಬಹುಕಾಲದ ಹಿಂದೆ ಹಂಪಿ ಸಮೀಪದ ಬೆಟ್ಟದ ಗವಿಯಲ್ಲಿ ಒಬ್ಬ ಶಿವಶರಣ ವಾಸವಾಗಿದ್ದನು. ಈತನು ಬಸವಣ್ಣನವರ ಪರಮ ಭಕ್ತನಾಗಿದ್ದನು. ದಿನಂಪ್ರತಿ ವಿಭೂತಿ ಧಾರಣೆ ಲಿಂಗಾರ್ಚನೆ ಮಾಡಿಕೊಂಡು ಶಿವಭಕ್ತಿಯಲ್ಲಿ ತೊಡಗಿಕೊಂಡಿರುತ್ತಿದ್ದನು. ಈ ಶರಣನಿಗೊಬ್ಬ ಶಿಷ್ಯ ಇದ್ದನು. ಅಗಲೇ ಶರಣರಿಗೆ ಸುಮಾರು ಎಂಬತ್ತು ವರ್ಷ ವಯಸ್ಸಾಗಿತ್ತು. ಅತಿಯಾದ ಬಿಸಿಲಿನ ಧಗೆಯಿಂದಾಗಿ ಶರಣರಿಗೆ ನೀರಿನ ದಾಹವಾಗಿತ್ತು. ತಾವು ವಾಸವಿರುವ ಸಮೀಪಿದ್ದ ಕೊಳ ಬತ್ತಿದ ಕಾರಣ ಗುರು ಶಿಷ್ಯ ಇಬ್ಬರು ನೀರನ್ನು ಹುಡುಕುತ್ತಾ ಚೆನ್ನಿ ಬರುತ್ತಿದ್ದ ಹಾದಿ ಮಾರ್ಗವಾಗಿ ಇವರು ನಡೆದು ಬರುತ್ತಾರೆ. ಶರಣರಿಗೆ ನೀರಿನ ದಾಹ ಇನ್ನು ಅಧಿಕವಾಗಿದ್ದರಿಂದ ಇನ್ನು ಮುಂದೆ ಹೆಜ್ಜೆಹಾಕಲು ಆಗದೆ ಶಿಷ್ಯನಿಗೆ ನೀರು ತರಲು ಆದೇಶಿಸಿ ಮಾರ್ಗಮಧ್ಯದಲ್ಲಿಯೇ ಶರಣರು ಮಲಗಿಕೊಳ್ಳುತ್ತಾರೆ. ಅದೇ ಮಾರ್ಗವಾಗಿ ಕತ್ತೆಸವಾರಿ ಮೇಲೆ ಡೊಂಬರ ಚೆನ್ನಿ ಬರುತ್ತಿರುತ್ತಾಳೆ. ಮಾರ್ಗ ಮಧ್ಯದಲ್ಲಿ ಮಲಗಿಕೊಂಡಿದ್ದ ಶರಣರನ್ನು ಕಂಡು ಆಶ್ಚರ್ಯಚಕಿತಳಾದ ಚೆನ್ನಿಯಾರಿರಬಹುದು ಇಂಥ ಮಧ್ಯಾಹ್ನದ ಸುಡು ಬಿಸಿಲಿನಲ್ಲಿ ಮಲಗಿಕೊಂಡಿರುವ ವಯಸ್ಸಾದ ಮುದುಕ ಎಂದು ತನ್ನ ಮನಸ್ಸಿನಲ್ಲಿಯೇ ವಿಚಾರ ಮಾಡಿಕೊಳ್ಳುತ್ತಾ ಆತನ ಹತ್ತಿರ ಹೋದಳು. ಅಷ್ಟರಲ್ಲಿಯೇ ಶರಣರು ಬಾಯಿತೆಗೆದು ನೀರಿನ ದಾಹವಾಗಿದೆ ತಾಯಿ ಸ್ವಲ್ಪ ನೀರು ಇದ್ದರೆ ಕೊಡು ಎಂದರು. ಚೆನ್ನಿ ತಕ್ಷಣವೇ ತನ್ನಲ್ಲಿರುವ ನೀರನ್ನು ಶರಣರ ಬಾಯಿಯೊಳಗೆ ಸುರಿದಳು. ಆಗ ಶರಣರ ದಾಹನೀಗಿ, ಸಾಯುವ ಕೊನೆಯಲ್ಲಿ ಶರಣರು ಚೆನ್ನಿಯ ಕಿವಿಯೊಳಗೆ ಏನೋ ಮಂತ್ರೋಪದೇಶ ಹೇಳಿ ಹಠತ್ತಾಗಿ ಸ್ವರ್ಗಸ್ಥವಾದರು. ಅಷ್ಟರಲ್ಲಿಯೇ ನೀರು ತರಲು ಹೋದ ಶಿಷ್ಯ ಅಲ್ಲಿಗೆ ಬಂದು ನೋಡಲು ಆಗಲೆ ಶರಣರು ಅಮರಾಗಿದ್ದರು. ಚೆನ್ನಿ ಆ ಶಿಷ್ಯನಿಗೆ ಇವರು ನಿಮಗೆ ಏನಾಗಬೇಕು ಎಂದಳು. ಇವರು ನಮ್ಮ ಗುರುಗಳು ಇವರೊಬ್ಬ ಮಹಾನ್ ಶರಣರು ಎಂಬುದಾಗಿ ಹೇಳಿದನು. ಶಿಷ್ಯ ದುಃಖಿಸುತ್ತಾ ನನ್ನ ಬದುಕು ಬೀದಿಪಾಲು, ನನಗೆ ಯಾರು ದಿಕ್ಕಿಲ್ಲ ನನಗಿದ್ದ ಆ ಒಬ್ಬ ಶರಣರು ಶಿವನ ಪಾದ ಸೇರಿಕೊಂಡರು ಈಗ ನನ್ನಗತಿ ಏನೆಂದು ಆ ಶಿಷ್ಯ ಚಿಂತಿಸುತ್ತಿರಲು ಚೆನ್ನಿಗೆ ಇವನ ಮೇಲೆ ಕರುಣೆ ಬಂದು ನೀನು ನನ್ನ ಜೊತೆಗೆ ಬಾ ನಿನಗೆ ಒಂದು ಕೆಲಸ ಕೊಡುತ್ತೇನೆ

ಎಂದಳು. ಹೀಗೆ ಆ ಶಿಷ್ಯನು ಚೆನ್ನಿಯ ಗುಂಪನ್ನು ಸೇರಿಕೊಂಡನು. ಹಂಪಿ ಬಜಾರ ಮಧ್ಯದಲ್ಲಿ ತಮ್ಮ ಡೇರಿಯನ್ನು ಹಾಕಿ ಆ ದಿನ ಡೊಂಬರಾಟ ಪ್ರದರ್ಶನ ಮಾಡಲು ತಯಾರಿ ಮಾಡಿಕೊಳ್ಳುತ್ತಿದ್ದಂತೆ ಚೆನ್ನಿಯ ಸಲಹೆ ಮೇರಿಗೆ ತಂತಿ ಕಟ್ಟುವ ಎರಡು ಗೂಟಗಳನ್ನು ಸುತ್ತಿಗೆಯಿಂದ ಬಡಿದು ಎರಡು ತಂತಿಗಳನ್ನು ಗೂಟಕ್ಕೆ ಬಿಗಿದನು.

ನಂತರ ಡೊಂಬರಾಟ ಶುರುವಾಯಿತು. ತಂತಿಯ ಮೇಲೆ ಒಬ್ಬ ಬಾಲಕ ತನ್ನ ಎರಡು ಕಾಲಗಳ ಬ್ಯಾಲನ್ಸ್ ಸಹಾಯದಿಂದ ನಡೆದು ಬರುತ್ತಿರುತ್ತಾನೆ. ತಂತಿಯ ಕಂಬವನ್ನು ಸರಿಯಾಗಿ ನಡೆದಿದ್ದರಿಂದಾಗಿ ಕಂಬ ಅಲುಗಾಡಿ ಆಯ ತಪ್ಪಿದ್ದರಿಂದ ಮೇಲಿಂದ ಕೆಳಗೆ ಬಿದ್ದು ಬಾಲಕ ಮರಣ ಹೊಂದಿರನು ಈ ದುರಂತವು ಚೆನ್ನಿಗೆ ದುಃಖವುಂಟು ಮಾಡಿತು. ಚೆನ್ನಿಯ ದುಃಖವನ್ನ ಕಂಡ ಶಿಷ್ಯ ಚೆನ್ನಿಯ ಹತ್ತಿರ ಬಂದು ಅಮ್ಮ ನಮ್ಮ ಗುರುಗಳು ಸಾಯುವಾಗ ನಿಮ್ಮ ಕಿವಿಯಲ್ಲಿ ಏನೋ ಹೇಳಿರಬೇಕಲ್ಲ. ಅದನ್ನು ನಿಮ್ಮ ಮನಸ್ಸಿನಲ್ಲಿಯೇ ಪುನರುಚ್ಚಾರಣೆ ಮಾಡಿಕೊಳ್ಳಿ. ಆ ಮಗುವನ್ನು ನಾನು ಬದುಕಿಸುತ್ತೇನೆ ಎಂದನು. ಚೆನ್ನಿ ಹಾಗೆಯೇ ಮಾಡಿದಳು. ಮೇಲಿಂದ ಬಿದ್ದು ಸತ್ತ ಹೋಗಿದ್ದ ಆ ಬಾಲಕ ಚೆನ್ನಿ ಹೇಳಿದ ಮಂತ್ರದಿಂದಾಗಿ, ಮತ್ತೆ ಜೀವಂತವಾಗಿ ಬದುಕುಳಿದನು. ಶರಣರು ಉಪದೇಶ ಮಾಡಿದ ಆ ಮಂತ್ರಕ್ಕೆ ಇಷ್ಟು ಶಕ್ತಿಯಿದೆಯಾ ಎಂದು ಚೆನ್ನಿ ಆಶ್ಚರ್ಯ ಚಕಿತಳಾದಳು. ಆಗ ಇದು ಶರಣರ ಮಹಿಮೆ ಇರಬೇಕು ಅಂದುಕೊಂಡಳು.

ಆಗ ಶಿಷ್ಯ ಹೇಳಿದ ಚೆನ್ನಿಗೆ, ತಾಯಿ ನಮ್ಮ ಗುರುಗಳು ಮಹಾತ್ಮರು ನಾನು ಸುಮಾರು ವರ್ಷಗಳಿಂದ ನಮ್ಮ ಶರಣರ ಸೇವೆ ಮಾಡುತ್ತಾ ಬಂದಿದ್ದೇನೆ. ಆದರೆ, ಅವರಿಂದ ಮಂತ್ರೋಪದೇಶ ಪಡೆಯಲು ನಾನು ಬಹಳ ಶ್ರಮಪಟ್ಟೆ. ಆದರೆ ಕೊನೆಗೂ ಅದು ನನ್ನಿಂದಾಗಲಿಲ್ಲ. ಯಾವ ಪೂರ್ವಜನ್ಮದ ಪುಣ್ಯ ನಿಮಗೆಲ್ಲ ತಕ್ಷಣವೇ ಮಂತ್ರೋಪದೇಶ ದೊರಕಿತ್ತಲ್ಲ. ಇನ್ನೂ ಮುಂದೆ ನೀವು ಧನ್ಯರು, ಮಹಾನ್ ಶಿವಶರಣೆಯಾಗುವ ದೀಕ್ಷೆಯೇ ನಿಮ್ಮ ಪಾಲಿಗೆ ಬಂದಿದೆ. ನಿಮ್ಮನ್ನು ಒಂದಲ್ಲಾ ಒಂದು ದಿನ ಶರಣರ ಮಾರ್ಗದತ್ತ ಆ ಮಂತ್ರೋಪದೇಶ ಕೊಂಡೊಯ್ಯುತ್ತದೆ ಎಂದನು. ಹಾಗೆ, ಆ ಶಿಷ್ಯ ತಾಯಿ ನಾನು ಇಂದಿನಿಂದ ನಿಮ್ಮ ಪರಮ ಶಿಷ್ಯನಾಗಿ, ಸದಾ ನಿಮ್ಮ ಸೇವೆ ನಿಮ್ಮ ಹಿತನುಡಿಗಳನ್ನು ನಾನು ಕೇಳಲು ಕಾತುರನಾಗಿದ್ದೇನೆ ಎಂಬುದಾಗಿ ಹೇಳಿದನು.

ಅಷ್ಟರಲ್ಲಿಯೇ ಯಾವುದೂ ದಿವ್ಯಶಕ್ತಿ ಚೆನ್ನಿ ನೀನು ಇಂದಿನಿಂದ ಮಹಾನ್ ಶಿವಶರಣೆಯಾಗಿದ್ದೀಯೇ. ನಿನ್ನಿಂದಾದರೂ ಲೋಕದ್ದೋರವಾಗಲಿ ಎಂಬುದಾಗಿ ದಿವ್ಯವಾಣಿ ನುಡಿಯಿತು. ಅಂದಿನಿಂದ ಚೆನ್ನಿಯಲ್ಲಿ ಅಗಾಧವಾದ ಶಕ್ತಿ ಮೈಗೂಡಿತು. ಶಿವಶರಣೆಯಾದ ಚೆನ್ನಿ ಶಿವಶರಣರೊಡನೆ ಚರ್ಚಿಸಲು ಕೂಡಲಸಂಗಮಕ್ಕೆ ಹೋಗುತ್ತಿದ್ದಳು. ಅಲ್ಲಿ ಕ್ರಾಂತಿಕಾರಿ ಬಸವಣ್ಣ, ಬಳ್ಳಿಗಾವಿ ಅಲ್ಲಮಪ್ರಭು, ಮಾದಾರ ಚೆನ್ನಯ್ಯ

ಡೋಹರ ಕಕ್ಕಯ್ಯ, ಡೊಂಬರ ಚೆನ್ನಿ, ಅಡಪಾದ ಅಪ್ಪಯ್ಯ, ಅಕ್ಕಮಹಾದೇವಿ, ಅಂಬಿಗರ ಚೌಡಯ್ಯ, ಕಿನ್ನರಿ ಬೊಮ್ಮಯ್ಯ, ಮಡಿವಾಳ ಮಾಚಯ್ಯ, ಶೀಲವಂತ ಕಲ್ಯಾಣಮ್ಮ ಮುಂತಾದ ಶಿವಶರಣೆಯರೊಡನೆ ಚರ್ಚಿಸುತ್ತಿದ್ದಳು. ಹೀಗೆ ಡೊಂಬರು ಹನ್ನೆರಡನೇ ಶತಮಾನದ ಜೊತೆಗೆ ತಮ್ಮ ಸಂಬಂಧವನ್ನು ಏರ್ಪಡಿಸಿಕೊಳ್ಳಲು ಯತ್ನಿಸುತ್ತಾರೆ. ಡೊಂಬರ ಚೆನ್ನಿಯ ವೃತ್ತಾಂತವು ಡೊಂಬರ ಸಾಮಾಜಿಕ ಕೀಳರಿಮೆಗಳನ್ನು ನಿವಾರಿಸುವ ಸೃಜನಶೀಲ ಪ್ರಯತ್ನದಂತೆಯೂ ಕಾಣುತ್ತದೆ. ಡೊಂಬರ ಚೆನ್ನಿ ಅನುಭವ ಮಂಟಪದಲ್ಲಿ ಡೊಂಬರನ್ನು ಪ್ರತಿನಿಧಿಸುವ ವ್ಯಕ್ತಿಯಾಗಿ ಇಲ್ಲಿ ಚಿತ್ರಿತವಾಗಿದ್ದಾಳೆ.

ಡೊಂಬರು ಭಾರತದ ಶ್ರೇಣೀಕೃತ ವ್ಯವಸ್ಥೆಯ ಅಂಚಿನಲ್ಲಿರುವ ಒಂದು ಪುಟ್ಟ ಸಮಾಜವಾಗಿದೆ. ಕರ್ನಾಟಕದಲ್ಲಂತೂ ಡೊಂಬರು ಅತ್ಯಂತ ಅಲ್ಪಸಂಖ್ಯಾತರಾಗಿದ್ದಾರೆ. ಅದರಲ್ಲೂ ಬಳ್ಳಾರಿಯಂತಹ ಹಿಂದುಳಿದ ಜಿಲ್ಲೆಯಲ್ಲಂತೂ ಇವರು ಇನ್ನೂ ಆರ್ಥಿಕವಾಗಿ ಶೋಚನೀಯ ಸ್ಥಿತಿಯಲ್ಲೇ ಇದ್ದಾರೆ. ಪ್ರಸ್ತುತ ಅಧ್ಯಾಯದಲ್ಲಿ ಡೊಂಬರ ಸಮಾಜದ ಚಾರಿತ್ರಿಕ ಬೆಳವಣಿಗೆಯ ಕುರಿತ ವಿವರಗಳನ್ನು ಕೊಡಲು ಯತ್ನಿಸಲಾಗಿದೆ.

### ಅಲೆಮಾರಿ ಡೊಂಬರು

ಡೊಂಬರು ಒಂದು ಊರಿನಲ್ಲಿ ಸ್ಥಿರವಾಗಿ ಇರುವುದುಂಟೆ ? ಮನೆ ಮಾರು ಗೊತ್ತುಗುರಿ ಇಲ್ಲದೆ ದೋ ದೋ ಎಂದು ಸುರಿಯುವ ಮಳೆ, ಮೈ ಕೊರೆಯುವ ಚಳಿ, ಸುಡುಬಿಸಿಲಿನಲ್ಲಿ ತಮ್ಮ ನೆಚ್ಚಿನ ಸಹಚರ ಪ್ರಾಣಿಗಳಾದ ಕತ್ತೆ, ಕುದುರೆಗಳ ಮೇಲೆ ಗಂಟುಮೂಟೆಗಳನ್ನು ಹೇರಿಕೊಂಡು ತಮ್ಮ ಹೊಟ್ಟೆ ಪಾಡಿಗಾಗಿ ಕಸರತ್ತಿನ ಪ್ರದರ್ಶನವನ್ನು ಆಡುತ್ತ ಊರಿಂದ ಊರಿಗೆ ಅಲೆಯುತ್ತಾರೆ.

### ಡೊಂಬರ ಮೂಲಸ್ಥಾನ

ಡೊಂಬರು ಮೂಲತಃ ಗುಜರಾತ. ರಾಜಸ್ಥಾನ, ಪಂಜಾಬ, ಬಂಗಾಲ, ಬಿಹಾರ, ಓರಿಸ್ಸಾ, ಮಹಾರಾಷ್ಟ್ರ, ಕರ್ನಾಟಕ, ಆಂಧ್ರಪ್ರದೇಶ ಮತ್ತು ತಮಿಳುನಾಡಿನಲ್ಲಿಯೂ ಕಾಣಸಿಗುತ್ತಾರೆ. ಡೊಂಬರು ಮೂಲತಃ ಗುಜರಾತದವರು ಎಂಬುದಕ್ಕೆ ಇವರ ಆಡುಭಾಷೆ ಗುಜರಾತಿ ಉಪಭಾಷೆ ಆಗಿರುವುದೇ ಬಲವಾದ ಕಾರಣ. ಪೂರ್ವದಲ್ಲಿ ತಮ್ಮ ವೃತ್ತಿ ಕಾರಣದಿಂದಾಗಿ ದೇಶಾದ್ಯಂತ ಚದುರಿಕೊಂಡಿದ್ದಾರೆ. ಉತ್ತರಭಾರತ ಮತ್ತು ದಕ್ಷಿಣಭಾರತದ ಡೊಂಬರಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ಪೂರ್ವದಲ್ಲಿ ಇವರು ಒಂದೇ ಮೂಲದಿಂದ ಒಂದು ಕಾಲಾಂತರದಲ್ಲಿ ವಿವಿಧ ವೃತ್ತಿ ಪಂಗಡಗಳಾಗಿ ಬೇರ್ಪಟ್ಟಿರಬೇಕು. ಇಂದು ಇವರಲ್ಲಿ ಕೆಲವರು ತಮ್ಮ ಕುಲ ಸಂಕೇತಾರಾಧನೆ ಭಾಷೆ ಇತ್ಯಾದಿಗಳನ್ನು ಮರೆತು ವಿವಿಧ ಪ್ರಾಂತೀಯ ಭಾಷೆಗಳನ್ನು ತಮ್ಮ ಮನೆ ಮಾತಾಗಿ ರೂಢಿಸಿಕೊಂಡಿದ್ದಾರೆ. "ಡೊಂಬರ ಮೂಲವನ್ನು ಕುರಿತು ಜಿ.ಎ.

ಗ್ರಿಯರ್ಸನ್ ಅವರು ಡೊಂಬರು ಯುರೋಪಿನ ಜಿಪ್ಸ್ ಜನಾಂಗದ ಮೂಲದವರಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ."[೧೦] ಇ. ಎಡ್ಗರ್ ಥರ್ಸ್ಟನ್ ಅವರು "ಡೊಂಬರು ವಂಶಪಾರಂಪರ್ಯವಾಗಿ ಜಯಪುರ ಮಹಾರಾಜರ ಸಂಗೀತಗಾರರಾಗಿದ್ದರು ಎಂದು ಹೇಳಿದ್ದಾರೆ."[೧೧]

"ಸುಮಾರು ೧೧೮೪ರಲ್ಲಿ ಕಾಶ್ಮೀರದ ಕವಿ ಕಲ್ಹಣ ತನ್ನ ಕೃತಿ ರಾಜ ತರಂಗಿಣಿಯಲ್ಲಿ ಡೊಂಬರ ಒಂದು ಕಲಾತ್ಮಕ ತಂಡದ ವರ್ಣನೆ ಮಾಡುತ್ತಾನೆ. ಸುಮಾರು ೯೨೩ ೯೩೮ರ ಕಾಲಾವಧಿಯಲ್ಲಿ ರಾಜ್ಯವಾಳಿದ ಕಾಶ್ಮೀರದ ಅರಸರು, ಚಕ್ರವರ್ಮನ ಆಸ್ಥಾನಕ್ಕೆ ಪ್ರಸಿದ್ಧ ಡೊಂಬರ ನಾಯಕ ರಂಗ ತನ್ನ ನೃತ್ಯ ಸಂಗೀತಗಾರರ ಗುಂಪಿನೊಡನೆ ಬಂದನು. ರಾಜತರಂಗಿಣಿ ಕಾವ್ಯದ ೫ನೆ ತರಂಗದಲ್ಲಿ ಸುಮಾರು ೨೮ ಶ್ಲೋಕಗಳು ಈ ಘಟನೆಯ ವರ್ಣನೆಗಾಗಿಯೇ ಮೀಸಲಾಗಿದೆ."[೧೨]

ಸಂಡೂರಿನಲ್ಲಿ ನಾನು ಕ್ಷೇತ್ರಕಾರ್ಯ ಮಾಡುತ್ತಿರುವಾಗ ಈ ಸಮುದಾಯದ ಚಾರಿತ್ರಿಕ ಹಿನ್ನೆಲೆಯ ಕುರಿತು ನನಗೆ ಹೆಚ್ಚಿನ ಮಾಹಿತಿ ದೊರಕಿತು. ಇಂದು ಡೊಂಬರು ಬೇಸಾಯವನ್ನು ಅವಲಂಬಿಸಿ ಜೀವನ ನಡೆಸುತ್ತಿದ್ದಾರೆ. ಅಲೆಮಾರಿ ಡೊಂಬರು ಅನ್ನುವ ಮಾತು ಇವತ್ತಿನ ಸಂದರ್ಭದಲ್ಲಿ ಸೂಕ್ತವಾದ ಪದವಲ್ಲ ಎಂದು ಹೇಳಬಹುದು. ಡೊಂಬರ ಸಮುದಾಯದಲ್ಲಿಂದು ಯಾರು ಡೊಂಬರಾಟ ಮಾಡುವುದಿಲ್ಲ. ತಮ್ಮ ಆದಿಮ, ಮೂಲವೃತ್ತಿಯನ್ನು ಬಿಟ್ಟುಬಿಟ್ಟಿದ್ದಾರೆ. ಸಾಮಾನ್ಯವಾಗಿ ನೆಲೆನಿಂತ ಜನರಂತೆ ಜೀವಿಸುತ್ತಿದ್ದಾರೆ. ಜನಸಾಮಾನ್ಯರ ಮಧ್ಯದಲ್ಲಿ ಕಷ್ಟದ ಜೀವನ ಸಾಗಿಸುತ್ತಿದ್ದಾರೆ. ತಮ್ಮ ಸಮುದಾಯದ ಪೂರ್ವಕಥೆ, ಪುರಾಣದ ವೃತ್ತಾಂತದ ಬಗೆಗೆ ಈಗಿನ ಯುವಕರನ್ನು ಪ್ರಶ್ನೆ ಮಾಡಿದರೆ, ಅವುಗಳು ನಮಗೆ ಗೊತ್ತಿಲ್ಲ ಸಾರ್ ಅನ್ನುತ್ತಾರೆ. ನಾವು ಹುಟ್ಟಿರೋದು ಇಲ್ಲೆ, ಬೆಳೆಯುತ್ತಿರುವುದು ಇಲ್ಲೇ ನಮ್ಮ ಮಾತೃಭಾಷೆ ಕನ್ನಡವೆಂದು ಹೇಳುತ್ತಾರೆ.

ಸಂಡೂರಿನ ಡೊಂಬರ ಶ್ರೀನಿವಾಸ, ಕೂಡ್ಲಿಗಿಯ ಡೊಂಬರ ಭರಮಪ್ಪ ಮತ್ತು ಕಮಲಾಪುರದ ನಿಂಗಪ್ಪ ಮೂರು ವ್ಯಕ್ತಿಗಳು ಮಾತ್ರ ಡೊಂಬರು ಹೇಗೆ ಸಂಡೂರಿಗೆ ಬಂದು ನೆಲೆ ನಿಂತರು ಎಂಬ ಪ್ರಶ್ನೆಗೆ ಉತ್ತರಿಸುತ್ತಾರೆ. ಇವರೆಲ್ಲರ ಅಭಿಪ್ರಾಯ ಒಂದೇ ಆಗಿದೆ. ಡೊಂಬರು ಸಂಡೂರಿನಲ್ಲಿ ನೆಲೆಯೂರುವುದಕ್ಕೆ ಕಾರಣ ನಮ್ಮ ಹಿರಿಯ ತಲೆಮಾರಿನವರು ಅಲೆಮಾರಿಗಳಂತೆ ಊರೂರು ಅಲೆಯುವುದನ್ನು ರೂಢಿಸಿಕೊಂಡು ಡೊಂಬರಾಟ ಪ್ರದರ್ಶನ ಮಾಡುವ ಮೂಲಕ ಹೊಟ್ಟೆ ತುಂಬಿಸಿಕೊಳ್ಳಲು ಸಂಡೂರು ಕಡೆ ಬಂದಿದ್ದಾರೆ.

ಸಂಡೂರು ಮಹಾರಾಜನು ಡೊಂಬರನ್ನು ತಮ್ಮ ಆಸ್ಥಾನಕ್ಕೆ ಬರಮಾಡಿಕೊಂಡು ಡೊಂಬರಾಟದ ಸಾಹಸ ಕುರಿತು ಕೇಳಿದ್ದಾರೆ. ಆಗ ಸಂಡೂರಿನ ರಾಜನು "ಆದರೆ ಇದುವರೆಗೂ ಡೊಂಬರಾಟ ಕಣ್ಣಾರೆ ಕಂಡಿಲ್ಲ. ಈಗ ನೋಡುವ ಅವಕಾಶ ಒದಗಿಬಂದಿದೆ. ಇತರೇ ರಾಜರುಗಳು ಆಸ್ಥಾನದಲ್ಲಿ ಡೊಂಬರು

ಇದ್ದಾರೆ. ಆಸ್ಥಾನಗಳಲ್ಲಿ ಪ್ರದರ್ಶನಾತ್ಮಕ ಕಲೆ ಮಹತ್ವ ಪಡೆದ ಬಗೆಗೆ ಕೇಳಿದ್ದೇನೆ. ಡೊಂಬರು ಮಾಡುವ ಕಸರತ್ತುಗಳು, ನೃತ್ಯ, ತಂತಿಯ ಮೇಲೆ ನಿರ್ಭಯವಾಗಿ ನಡೆದು ತೋರಿಸುತ್ತಾರೆ. ಇವರ ಹಲವಾರು ಪ್ರತಿಭೆಗಳನ್ನು ಮೆಚ್ಚಿದ ರಾಜರುಗಳು ತಮ್ಮ ಆಸ್ಥಾನಗಳಲ್ಲಿ ರಾಜಾಶ್ರಯ ಕೊಟ್ಟಿರುವುದನ್ನು ಸಹ ಕೇಳಿದ್ದೇನೆ. ಆದುದರಿಂದ ನಮ್ಮ ಭಾಗಕ್ಕೆ ನೀವು ಅಪರೂಪವೆಂಬಂತೆ ಬಂದಿರುವಿರಿ. ನಮ್ಮ ಆಸ್ಥಾನವ ಸರ್ವಜನರು ಡೊಂಬರಾಟ ನೋಡುವ ಕುತೂಹಲವಿದೆ. ಇಂದಿನಿಂದ ನಿಮಗೆ ಸಕಲ ಸೌಲಭ್ಯಗಳನ್ನು ಪೂರೈಸುವ ವ್ಯವಸ್ಥೆ ಮಾಡಿದ್ದೇನೆ. ಹಾಗಾಗಿ ನಿಮ್ಮ ಆಟವನ್ನು ತೋರಿಸಲು ಸಿದ್ಧತೆ ಮಾಡಿಕೊಳ್ಳಿರಿ" ಎಂದು ಸಂಡೂರಿನ ರಾಜರು ಅಪ್ಪಣೆ ಮಾಡಿದರಂತೆ. ಅವರ ಅಪ್ಪಣೆಯಂತೆ ಅದ್ಭುತವಾಗಿ ಜನರ ಮನ ಮಿಡಿಯುವಂತೆ ತಮ್ಮ ಡೊಂಬರಾಟವನ್ನು ಪ್ರದರ್ಶನ ಮಾಡಿ ತೋರಿಸಿದ್ದಾರೆ. ಡೊಂಬರಾಟದಿಂದ ಪ್ರಭಾವಿತನಾದ ಸಂಡೂರು ರಾಜನು ಹೀಗೆಂದ. ಡೊಂಬರು ಇನ್ನು ಮುಂದೆ ಊರೂರು ಅಲೆಯುವಂತಿಲ್ಲ. ನಮ್ಮ ಆಸ್ಥಾನದಲ್ಲಿಯೇ ಶಾಶ್ವತವಾಗಿ ನೆಲೆನಿಲ್ಲಬೇಕು. ನಿಮಗೆ ಇಂದಿನಿಂದ ಆಸ್ಥಾನದಲ್ಲಿ ಎಲ್ಲಾ ರೀತಿಯ ಸೌಕರ್ಯಗಳನ್ನು ಕಲ್ಪಿಸಿಕೊಡಲಾಗುತ್ತದೆ ಎಂದು ರಾಜನು ಆಜ್ಞೆ ಮಾಡಿದನಂತೆ. ರಾಜಾಜ್ಞೆಗೆ ಒಪ್ಪಿದ ಡೊಂಬರು ಊರೂರು ಅಲೆಯುವುದನ್ನೇ ನಿಲ್ಲಿಸಿದರು. ರಾಜನು ಇವರಿಗೆ ಕೆಲವು ಜವಾಬ್ದಾರಿಯುತ ಅಧಿಕಾರ ವಹಿಸಿಕೊಟ್ಟಿದ್ದನಂತೆ. ಆಸ್ಥಾನ ಸೈನಿಕರಿಗೆ ತಾವು ಕಲಿತ ಕಸರತ್ತುಗಳ ತರಬೇತಿ ಕಲಿಸುತ್ತಿದ್ದರಂತೆ. ಹೀಗೆ ಅನೇಕ ವರ್ಷಗಳ ಅಲ್ಲಿಯೇ ಕಳೆದರು. ಡೊಂಬರು ರಾಜನನ್ನು ಕುರಿತು ರಾಜರೇ ನಿಮ್ಮ ಹೆಸರು ಶಾಶ್ವತವಾಗಿ ಉಳಿಯಬೇಕಾದರೆ ನಮಗೆ ತಿಳಿದ ಏನಾದರೂ ಕಾಣಿಕೆಯ ರೂಪದಲ್ಲಿ ಅಥವಾ ದಾನವಾಗಿ ಕೊಡಬೇಕೆಂದು ಭಿನ್ನವಿಸಿಕೊಂಡಿದ್ದರಿಂದ. ಅದಕ್ಕೆ ಸಂತೋಷದಿಂದ ಸಂಡೂರಿನ ಮಹಾರಾಜರು ಒಪ್ಪಿಕೊಂಡು ಸುಮಾರು ಎರಡುನೂರು ಎಕರೆಯಷ್ಟು ಭೂಮಿಯನ್ನು ಬಳುವಳಿಯಾಗಿ ಡೊಂಬರಿಗೆ ಬಿಟ್ಟುಕೊಟ್ಟರಂತೆ. ಅದೇ ಭೂಮಿಯನ್ನೆ ಇಲ್ಲಿನ ಡೊಂಬರು ಈಗಲೂ ಉತ್ತಿ ಬಿತ್ತಿಕೊಳ್ಳುತ್ತಿದ್ದಾರಂತೆ. ಅದರಲ್ಲಿ ಅರ್ಧದಷ್ಟು ಭೂಮಿಯನ್ನು ಡೊಂಬರ ಕುಟುಂಬಗಳು ಹಂಚಿಕೊಂಡು ಬೇಸಾಯ ಮಾಡುತ್ತಿದ್ದಾರೆ. ಉಳಿದ ಅರ್ಧ ಭೂಮಿ ಪಾಳು ಬಿದ್ದಿದೆ. ಈಗ ಇವರು ಉಳಿಮೆ ಮಾಡಲು ಭೂಮಿಯನ್ನು ಮಾತ್ರ ಸಂಡೂರಿನ ಮಹಾರಾಜರೇ ಕೊಟ್ಟ ಭೂಮಿಯೆಂದು ಅಲ್ಲಿನ ಇತರ ಜನ ಸಮುದಾಯದ ಹಲವರು ಹೇಳುತ್ತಾರೆ. ಇನ್ನುಳಿದ ಅರ್ಧದಷ್ಟು ಭೂಮಿ ಪಾಳುಭೂಮಿಯಾಗಿ ಉಳಿದಿದೆಯಂತೆ. ಇದಕ್ಕೆ ಕಾರಣ ಸರಿಯಾದ ಭೂದಾಖಲೆ ಪತ್ರಗಳು ಇಲ್ಲದಿರುವುದೇ ಪ್ರಮುಖ ಸಮಸ್ಯೆಯಾಗಿದೆ ಎನ್ನುತ್ತಾರೆ.

ಡೊಂಬರು ಸಂಡೂರಿಗೆ ಬಂದು ನೆಲೆನಿಂತರು ಎಂಬುದಾಗಿ ಅಲ್ಲಿನ ಹಿರಿಯ ಡೊಂಬರು ಹೇಳಿದ ಮಾತಿದು. ಒಟ್ಟಿನಲ್ಲಿ ಅವರು ಎಲ್ಲಿಂದಲೆ ಬಂದಿರಲಿ ಅವರ ಐತಿಹಾಸಿಕ ಬದುಕು ಮುಖ್ಯವಾಗಿದೆ.

ಅಂದು ರಾಜನ ಆಸ್ಥಾನದಲ್ಲಿ ಆಶ್ರಯ ಪಡೆದು, ಇತರ ಸಮುದಾಯಗಳಿಗಿಂತ ಘನತೆ ಗೌರವಗಳಿಂದ ಬದುಕಿದ ಅವರು, ಇಂದು ಅನೇಕ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿ ಹಾಕಿಕೊಂಡಿರುವುದು ಸತ್ಯ.

## ಆ. ಆರ್ಥಿಕ ರೂಪಾಂತರಗಳು

ಸ್ವಾತಂತ್ರ್ಯಪೂರ್ವ ಅಥವಾ ವಸಾಹತುಶಾಹಿ, ಕಾಲಘಟ್ಟದಲ್ಲಿನ ಡೊಂಬರ ಆರ್ಥಿಕ ಸ್ಥಿತಿಯು ಉತ್ತಮವಾಗೇನು ಇರಲಿಲ್ಲ. ವಸಾಹತುಶಾಹಿ ಆಗಮನದಿಂದ ಪಾಶ್ಚಿಮಾತ್ಯ ಆರ್ಥಿಕ ನೀತಿ ಭಾರತದ ದೇಶೀ ಆರ್ಥಿಕತೆಯನ್ನು ನಿಯಂತ್ರಿಸಿತು. ಇದರಿಂದಾಗಿ ಸ್ವದೇಶಿ ಗುಡಿಕೈಗಾರಿಕೆಗಳ ಮೇಲೆ ಅಪಾರವಾದ ಪೆಟ್ಟುಬಿದ್ದಿತು. ಡೊಂಬರು ಸರ್ಕಸ್ ಮಾಡುವುದರ ಜೊತೆಜೊತೆಯಾಗಿ ಕರಕುಶಲ ವಸ್ತುಗಳ ತಯಾರಕರೂ ಆಗಿದ್ದರು. ವಸಾಹತುಶಾಹಿಯ ಅಬ್ಬರಕ್ಕೆ ಕರಕುಶಲ ತಯಾರಕರು ವಸ್ತುಗಳು ಧೂಳಿಪಟವಾದರು. ಡೊಂಬರ ಕರಕುಶಲಕಲೆಗಳೂ ಸಹ ನಾಶವಾದವು. ಕೊನೆಗೆ, ಡೊಂಬರಾಟವೊಂದು ಅವರ ಪ್ರಮುಖ ಆರ್ಥಿಕ ಮೂಲವಾಗಿ ಉಳಿಯಿತು. ಇದನ್ನೇ ನಂಬಿಕೊಂಡು ಜೀವನ ನಡೆಸಲು ಆರಂಭಿಸಿದರು. ದುರಾದೃಷ್ಟವಶಾತ್ ವಸಾಹತುಶಾಹಿ ಅಂತಿಮ ಘಟ್ಟದ ಸಂದರ್ಭದಲ್ಲಿ ಪ್ರಪಂಚ ಯುದ್ಧಗಳು ಶುರುವಾದವು. ಹಾಗೆ ಭಾರತದಲ್ಲಿ ಸ್ವತಂತ್ರ್ಯ ಹೋರಾಟಗಳು ಭರದಿಂದಲೇ ಸಾಗಿದ್ದವು. ಇದರಿಂದಾಗಿ ದೇಶದ ಬಹುಸಂಖ್ಯಾತ ಜನರು ಗಮನ ಆ ಕಡೆ ಸೆಳೆಯಿತು. ಇದರಿಂದ ಡೊಂಬರ ಮೂಲವೃತ್ತಿಗೆ ಪೆಟ್ಟುಬಿದ್ದಿತು. ಈ ಸಂದರ್ಭದಲ್ಲಿನ ಆರ್ಥಿಕ ಸ್ಥಿತಿ ಹದಗೆಟ್ಟಿತು.

ಸ್ವಾತಂತ್ರ್ಯನಂತರ ದೇಶೀ ಉತ್ಪಾದನಾ ವಿಧಾನಕ್ಕೆ ಮಾರುಕಟ್ಟೆ ಇಲ್ಲದಂತಹ ವ್ಯವಸ್ಥೆಯನ್ನು ರೂಪಿಸಲಾಯಿತು. ಜೊತೆಗೆ ಸ್ವಾತಂತ್ರ್ಯನಂತರದ ಭಾರತದ ಆರ್ಥಿಕ ಯೋಜನೆಗಳು ದೇಶೀ ತಂತ್ರಜ್ಞಾನದ ವಿಧಾನಗಳನ್ನೇ ಕಡೆಗಣಿಸಿ ಯುರೋಪಿನ ಕೈಗಾರಿಕಾ ಕ್ರಾಂತಿಯ ಪೊಳ್ಳು ಮಾದರಿಗಳನ್ನು ಅನುಕರಿಸುವ ಮೂಲಕ ಈ ಅನೇಕ ಸಮುದಾಯಗಳ ಆರ್ಥಿಕ ವ್ಯವಸ್ಥೆಯನ್ನೆ ದುರ್ಬಲಗೊಳಿಸಿತು. ಜಾತಿಯ ಕೈಗಳಲ್ಲಿದ್ದ ಕರಕುಶಲ ಉದ್ಯೋಗಗಳು ಕ್ಷೀಣಿಸುವಂತೆ ಅಥವಾ ಅದಕ್ಕೆ ಯಾವ ಗೌರವವೂ ಇಲ್ಲದಂತೆ ಮಾಡಿತು. ಆಧುನಿಕ ಜಗತ್ತಿನ ಆರ್ಥಿಕ ವ್ಯವಸ್ಥೆಗೆ ಹೊಂದಿಕೊಳ್ಳಲು ಸೂಕ್ತವಾದ ತರಬೇತಿಯ ಸಿದ್ಧತೆಯೇ ಕೆಳಜಾತಿಗಳಿಗೆ ಇರಲಿಲ್ಲ. ಆದೂ ಅಲ್ಲದೆ ನಮ್ಮ ಎಲ್ಲಾ ಯೋಜನೆಗಳೂ ಪಶ್ಚಿಮದ ಅಭಿವೃದ್ಧಿಯ ಮಾನದಂಡಗಳನ್ನು ಮಾದರಿಯಾಗಿಟ್ಟುಕೊಂಡು ಬಂದಂತಹವು. ಇವತ್ತಿಗೂ ಕೆಳಜಾತಿಗಳಿಗೆ ಆದಿವಾಸಿ ಬುಡಕಟ್ಟುಗಳಿಗೆ ಅರ್ಥಪೂರ್ಣವಾದ ಆರ್ಥಿಕ ಪ್ರವೇಶವೇ ಇಲ್ಲ. ಬುಡಕಟ್ಟುಗಳನ್ನು ಅತ್ಯಂತ ಕೆಳಮಟ್ಟದ ಕೂಲಿಯಾಳುಗಳಾಗಿ, ಗುಲಾಮರಾಗಿ ಇವತ್ತಿಗೂ ದುಡಿಯುತ್ತಿದ್ದಾರೆ.

ಸ್ವಾತಂತ್ರ್ಯನಂತರ ಸರ್ಕಾರ ಹೊಸಹೊಸ ಕಾನೂನುಗಳನ್ನು ರೂಪಿಸಿತು. ಅಲ್ಲದೆ ಭಾಷಾವಾರು ಪ್ರಾಂತ್ಯಗಳ ರಚನೆಯಿಂದಾಗಿ ಡೊಂಬರು ಅಲೆಮಾರಿತನವನ್ನೇ ತ್ಯಜಿಸಬೇಕಾಯಿತು. ಇದರಿಂದಾಗಿ

ಡೊಂಬರಾಟ ಸೀಮಿತ ಪ್ರದೇಶಗಳಿಗೆ ಮಾತ್ರ ಮೀಸಲಾಯಿತು. ಇಂತಹ ಇಕ್ಕಟ್ಟನ್ನೆ ಎದುರಿಸಲಾರದೆ ಸುಮಾರು ಶೇ. ೭೦ರಷ್ಟು ಡೊಂಬರು ತಮ್ಮ ಮೂಲವೃತ್ತಿಯಾದ ಡೊಂಬರಾಟಕ್ಕೆ ವಿದಾಯ ಹೇಳಿದರು. ಇಷ್ಟು ಜನರ ಆರ್ಥಿಕ ರೂಪಾಂತರಗಳು ತೀರಾ ಕುಂಠಿತವಾಯಿತು. ಇಂತಹ ಸಂದರ್ಭದಲ್ಲಿ ದೇಶದಲ್ಲಿ ಹಸಿರುಕ್ರಾಂತಿ ಅಲೆಯೆದ್ದಿತು. ಈ ಹಸಿರುಕ್ರಾಂತಿಯ ರೂವಾರಿಗಳು, ಶ್ರೀಮಂತರು ಮತ್ತು ಭೂಮಾಲಿಕರಾಗಿದ್ದರು. ಇಂತಹವರ ಕೈಕೆಳಗೆ, ಕೃಷಿ ಕಾರ್ಮಿಕರಾಗಿ ಡೊಂಬರು ಸೇರಿಕೊಂಡರು. ಹಸಿರು ಕ್ರಾಂತಿಯಾದ ಒಂದೆರಡು ವರ್ಷಗಳ ಮಟ್ಟಿಗೆ ಹಸಿವನ್ನು ನೀಗಿಸಿಕೊಳ್ಳುವಷ್ಟು ಮಾತ್ರ ಆಹಾರವು ದೊರಕಿದ್ದಿತು. ಈ ಸಂದರ್ಭದಲ್ಲಿನ ಆರ್ಥಿಕಮಟ್ಟ ಶೂನ್ಯವಾಗಿದ್ದಿತು. ತದನಂತರ ದೇಶಕ್ಕೆ ಬಂದ ಭೀಕರ ಬರಗಾಲದಿಂದಾಗಿ ಭೂಮಾಲಿಕರು ಕೃಷಿಕಾರ್ಮಿಕರನ್ನು ಹೊರದಬ್ಬಿದರು. ಇದರಿಂದಾಗಿ ಕೆಲಸ ಮಾಡುವ ಕೈಗಳಿಗೆ ಕೆಲಸವಿಲ್ಲದಂತಾಯಿತು.

## ೩. ವರ್ತಮಾನದಲ್ಲಿ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು

ವರ್ತಮಾನದ ಸಂದರ್ಭದಲ್ಲಿ ಡೊಂಬರ ಪ್ರಮುಖ ಆರ್ಥಿಕ ಪ್ರಮುಖ ಮೂಲ ಕೃಷಿಯೇ ಆಗಿದೆ. ಇದನ್ನು ನಂಬಿಕೊಂಡು ಜೀವನ ನಡೆಸುತ್ತಿದ್ದಾರೆ. ಹಿಂದಿನ ಕಾಲದಲ್ಲಿ ಡೊಂಬರ ಮುಖ್ಯ ಆರ್ಥಿಕ ಮೂಲ ಡೊಂಬರಾಟವಾಗಿತ್ತು. ಆದರೆ ಆಧುನಿಕ ಕಾಲದ ಸರ್ಕಸ್ ಕಂಪನಿಯು ಎಲ್ಲ ಬಗೆಯ ಕಸರತ್ತು, ಕುಣಿತ, ಶೌರ್ಯ ಸಾಹಸಗಳು ಪ್ರತೀಕವಾಗಿದ್ದ ಡೊಂಬರಾಟ ಇಂದು ಕೇವಲ ಮೋಜಿನ ವಸ್ತುವಾಗಿ ಉಳಿದಿದೆ. ಅಲ್ಲದೆ, ಇಂದು ಆವೃತ್ತಿಯನ್ನು ಕೀಳಾಗಿ ಕಾಣುತ್ತಾರೆ. ಸರ್ಕಸ್ ಆಟ ಪ್ರಾಣಿ ಪಶುಪಕ್ಷಿಗಳನ್ನು ಪಳಗಿಸಿ ಹೆಚ್ಚು ಹೆಚ್ಚು ಮನರಂಜನೆ ಮತ್ತು ಪರಿಣಾಮಕಾರಿ ಪ್ರದರ್ಶನವಾಗಿ ರೂಪುಗೊಳ್ಳುತ್ತಿರುವ ವರ್ತಮಾನ ಕಾಲದ ರಭಸದ ಸುಳಿಗೆ ಸಿಕ್ಕಿ ಡೊಂಬರಾಟ ಸಂಪೂರ್ಣ ನಶಿಸಿ ಹೋಯಿತು.

ಡೊಂಬರು ಇಂದು ವರ್ತಮಾನ ಸಂದರ್ಭದಲ್ಲಿ ವಿವಿಧ ವೃತ್ತಿಗಳಿಗೆ ಅಂಟಿ ಹೋಗಿದ್ದಾರೆ. ನಿರ್ದಿಷ್ಟವಾಗಿ ಇಂಥದೇ ಇವರ ವೃತ್ತಿಯೆಂದು ಹೇಳುವುದು ಕಷ್ಟಸಾಧ್ಯವಾಗಿದೆ. ಹೀಗಾಗಿ ವರ್ತಮಾನದಲ್ಲಿ ಡೊಂಬರ ಆರ್ಥಿಕತೆಯ ಮೂಲ ಏಕಪ್ರಕಾರವಾಗಿಲ್ಲ. ಕ್ಷೇತ್ರಕಾರ್ಯಕ್ಕಾಗಿ ಬೂದುಗುಪ್ಪ ಗ್ರಾಮಕ್ಕೆ ಹೋಗಿದ್ದ ಸಂದರ್ಭದಲ್ಲಿ ಡೊಂಬರು ಹೇಳುವಂತೆ, ವರ್ತಮಾನ ಆರ್ಥಿಕ ಮೂಲ ಕೃಷಿಕೂಲಿ ಆಗಿದೆ ಎನ್ನುತ್ತಾರೆ. ಆದರೆ, ಇದರ ಜೊತೆಜೊತೆಯಾಗಿ ಕುರಿಸಾಗಾಣಿಕೆ ಮಾಡುತ್ತಾರೆ. ಕುರಿಸಾಗಾಣಿಕೆಯಿಂದ ಬಂದ ಹಣದಿಂದ ಕೆಲವರು ಭೂಮಿಯನ್ನು ಖರೀದಿಸಿದ್ದಾರೆ. ನಮಗೆ ಪ್ರಮುಖ ಜೀವನಾಧಾರ ಮೂಲವೆಂದರೆ ಕುರಿಸಾಕಾಣಿಕೆಯೆನ್ನುತ್ತಾರೆ. ಅಲ್ಲದೆ ಇದರ ಜೊತೆಗೆ ಬೇಸಾಯವನ್ನು ಸಹ ಮಾಡುತ್ತಾರೆ.

ಹಲವು ಕುಟುಂಬಗಳು ಏನನ್ನು ಸಾಕುವುದಿಲ್ಲ. ಕುರಿ ಸಾಕೋಣವೆಂದರೆ ಬಂಡವಾಳ ಹೂಡಲು ಹಣವಿಲ್ಲ. ಉಳಿಮೆ ಮಾಡುವುದಕ್ಕೆ ಭೂಮಿಯೇ ಇಲ್ಲ. ಇಂಥವರು ಬೇರೆಯವರ ಹೊಲಗದ್ದೆಗಳಲ್ಲಿ

ದುಡಿಯಲು ಹೋಗುತ್ತಾರೆ. ಇಂಥವರ ಸಂಖ್ಯೆಯಲ್ಲಿ ಶೇ. ೯೦ ರಷ್ಟು ಇದೆ. ಕೂಲಿಯೇ ಇವರ ಪ್ರಮುಖ ವರ್ತಮಾನದ ಆರ್ಥಿಕ ಮೂಲವಾಗಿದೆ. ಈ ಕೂಲಿ ಇಡೀ ವರ್ಷಪೂರ್ತಿ ಸಿಗಲಾರದು. ವರ್ಷದಲ್ಲಿ ಆರು ತಿಂಗಳುಗಳ ಕಾಲ ಮಾತ್ರ ಸಿಗುತ್ತದೆ. ಹೀಗಾಗಿ ವರ್ತಮಾನದ ಆರ್ಥಿಕ ಸ್ಥಿತಿ ಡೋಲಾಯ ಮಾನವಾಗಿದೆ.

ಡೊಂಬರು ಭಾರತದ ಜಾತಿವ್ಯವಸ್ಥೆಯಲ್ಲಿ ಅತ್ಯಂತ ಕೆಳಜಾತಿಯಾಗಿದ್ದರೂ, ಇತರೆ ಸಮುದಾಯಗಳೊಂದಿಗೆ ಹೊಂದಿಕೊಂಡಿದ್ದಾರೆ. ಇತರೆ ಮೇಲ್ಜಾತಿಯ ಸಮುದಾಯಗಳು ಕೀಳಾಗಿ ಕಂಡರೂ ಬದಲಾಗುತ್ತಿರುವ ಸಂದರ್ಭದಲ್ಲಿ ಪರಿಸ್ಪರ ತಿಳುವಳಿಕೆಯಿಂದ ಕೀಳಾಗಿ ಕಾಣುವುದನ್ನು ಅವರು ಮರೆಮಾಡಿದ್ದಾರೆ. ಡೊಂಬರಾಟ ವೃತ್ತಿ ಕಾರಣದಿಂದ ಈ ಸಮುದಾಯದವರನ್ನೆ ಅಂದಿನ ಸಮಾಜವು ಕೀಳಾಗಿ ಕಂಡಿತ್ತೆ ವಿನಃ ಬೇರೆಯಾವುದರಿಂದಲೂ ಅಲ್ಲ. ಇವತ್ತು ಆ ವೃತ್ತಿಯನ್ನೆ ಈ ಸಮುದಾಯವು ಬಿಟ್ಟುಬಿಟ್ಟಿದೆ. ಇತರರಂತೆ ವ್ಯವಸಾಯ ಮಾಡುತ್ತಿದ್ದಾರೆ. ಈ ಕಾರಣದಿಂದಾಗಿ ಇತ್ತೀಚೆಗೆ ಈ ಸಮುದಾಯಕ್ಕೆ ಸಾಮಾಜಿಕ ಅವಮಾನಗಳು ಕಡಿಮೆಯಾಗುತ್ತಿವೆ.

ಸದಾ ಬದಲಾಗುತ್ತಲೇ ಇರುವುದು ಸಮಾಜದ ಗುಣ. ಬದಲಾಗುತ್ತ ಹೋಗುವುದು ಒಂದು ನೈಸರ್ಗಿಕ ಕ್ರಿಯೆ ಕೂಡ. ಇದರಿಂದಾಗಿಯೇ ಸಮಾಜ ಸದಾ ಚಲನಶೀಲವಾಗಿದೆ. ಜನ ಸಮುದಾಯವು ಕಾಲದಿಂದ ಕಾಲಕ್ಕೆ ಜೀವನದ ವೇಗದ ಗತಿಗಳನ್ನು ಅಳವಡಿಸಿಕೊಳ್ಳುತ್ತಾ ಕ್ರಿಯಾಶೀಲವಾಗುತ್ತದೆ. ಇದು ಪ್ರಪಂಚದ ಯಾವುದೇ ಜನಸಮುದಾಯಕ್ಕೂ ಅನ್ವಯಗೊಳ್ಳುವಂಥದು. ಅಗಣಿತ ಆದಿವಾಸಿ ಬುಡಕಟ್ಟು ಕುಲಗುಂಪು ಇತ್ಯಾದಿ ವೃಂದಗಳಿರುವ ಭಾರತ ಅಷ್ಟೇ ಪ್ರಮಾಣದ ವಿಭಿನ್ನ ಸಾಂಸ್ಕೃತಿಕ ಘಟಕಗಳನ್ನೆ ಹೊಂದಿರುವ ಒಂದು ಅಪೂರ್ವ ಸಮಾಜ ಪರಿವರ್ತನೆಗೆ ಸಂಬಂಧಿಸಿದಂತೆ ಡಾ. ರಾಯ್‌ಬರ್ಮನ್ ಅವರು ಹೇಳುವಂತೆ "ಪರಿವರ್ತನೆಗೆ ಒಳಗಾಗುತ್ತಿರುವ ವಿವಿಧ ಸಮುದಾಯಗಳ ಬುಡಕಟ್ಟುಗಳ ಮೂಲಭೂತ ಹಕ್ಕು ಮತ್ತು ಘನತೆಗಳಿಗೆ ಧಕ್ಕೆಯಾಗದ ರೀತಿಯಲ್ಲಿ ಅವರನ್ನು ವಿಕಾಸದತ್ತ ಮುನ್ನೆಡೆಸುವುದು ಬಹುಮುಖ್ಯ"[೧೩] ಎಂದು ಹೇಳಿದ್ದಾರೆ.

ಬದಲಾಗುತ್ತಿರುವ ಭಾರತೀಯ ಸಮಾಜ ವ್ಯವಸ್ಥೆಯ ವರ್ಗೀಕೃತ ಶ್ರೇಣಿಯ ಪರಿಧಿಯಿಂದಾಚೆ ಉಳಿದುಕೊಂಡಿರುವ ಅನೇಕ ಬುಡಕಟ್ಟುಗಳಲ್ಲಿ ಡೊಂಬರದು ವಿಶಿಷ್ಟ ಸಮೂಹವಾಗಿದೆ. ಸಮಾಜದಲ್ಲಿ ತಮ್ಮದೇ ವಿಶಿಷ್ಟ ಸಮೂಹವಾಗಿದೆ. ಸಮಾಜದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಗಿಟ್ಟಿಸಿಕೊಂಡು ಬಂದಿರುವ ಹೆಮ್ಮೆ ಇವರದಾಗಿದೆ. ವೃತ್ತಿಗನುಗುಣವಾಗಿ ಪರಂಪರಾನುಗತವಾಗಿ ಜಾತಿಪದ್ಧತಿಯು ರೂಢಿಯಲ್ಲಿ ಬಂದಿತು. ಜಾತಿಜಾತಿಗೂ ಬೇರೆಬೇರೆ ವಿಧಿನಿಷೇದಗಳ ಪರಿಣಾಮವಾಗಿ ಮೇಲ್ವರ್ಗದವರು ಸದಾ ಮೇಲೇಯೇ ಉಳಿದರು. ಕೆಳವರ್ಗದವರು ಕೆಳದರ್ಜೆಯಲ್ಲಿಯೆ ಉಳಿದರು. ಇದರಿಂದಾಗಿ

ಜಾತಿಜಾತಿಗಳಲ್ಲಿ ತಾರತಮ್ಯ ಮೇಲುಕೀಳೆಂಬ ಬೇಧಬಾವ ಮುಂದುವರೆಯಿತು. ಇತ್ತೀಚೆಗೆ, ಇವೆಲ್ಲ ಮಾಯವಾಗಿ, ಕೆಲವು ಬದಲಾವಣೆಗಳಾಗಿವೆ.

ಹಿಂದಕ್ಕೆ ಡೊಂಬರ ಸಮುದಾಯದವರು ತಮ್ಮ ಜಾತಿಯ ಹೆಸರು ಹೇಳಿದರೆ ಜನ ನಮಗೆ ಕೀಳಾಗಿ ಕಾಣುತ್ತಾರೆ ಎನ್ನುವ ಭಾವನೆಯಿಂದ ತಮ್ಮ ಜಾತಿಯ ಹೆಸರು ಬದಲಾಗಿ ಬೇರೆ ಜಾತಿಯ ಹೆಸರು ಹೇಳಿಕೊಳ್ಳುತ್ತಿದ್ದರಂತೆ. ಆದರೆ, ಡೊಂಬರು ಧೈರ್ಯವಾಗಿ ತಮ್ಮ ಜಾತಿಯ ಹೆಸರನ್ನು ಹೇಳಿಕೊಳ್ಳುತ್ತಿದ್ದಾರೆ. ಇದಕ್ಕೆ ಕಾರಣ ಸಾಮಾಜಿಕವಾಗಿ ಇಂದು ಇವರನ್ನು ಯಾರು ತುಚ್ಛ ಭಾವನೆಯಿಂದ ಕಾಣುವುದಿಲ್ಲ.

ನಾನು ಕ್ಷೇತ್ರಕಾರ್ಯಕ್ಕಾಗಿ ಹೋದಾಗ ಡೊಂಬರ ಸಾಮಾಜಿಕ ಸ್ಥಿತಿಯನ್ನು ಕುರಿತು ಇತರೆ ಸಮುದಾಯಗಳ ವ್ಯಕ್ತಿಗಳನ್ನು ವಿಚಾರ ಮಾಡಿದೆ. ಅವರು ಹೇಳುವಂತೆ ಡೊಂಬರನ್ನು ಸಾಮಾಜಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದಾರೆ. ಇತರೆ ಎಲ್ಲಾ ಸಮುದಾಯಗಳು ಅವರನ್ನು ಗೌರವಭಾವದಿಂದಲೇ ಕಾಣುತ್ತಿದ್ದಾರೆ ಎಂದರು.

ಡೊಂಬರ ಯುವಕರು ಅಂತಜಾರ್ತೀಯ ವಿವಾಹಗಳನ್ನು ಸಹ ಮಾಡಿ ಕೊಂಡವರಿದ್ದಾರೆ. ಹೀಗಾಗಿ ಡೊಂಬರ ಸಮುದಾಯದ ಸಾಮಾಜಿಕ ವ್ಯವಸ್ಥೆಯಲ್ಲಿ ತುಂಬಾ ಸುಧಾರಣೆಯಾಗಿದೆ. ಇಂದು ಡೊಂಬರು ಸಹ ಹಲವಾರು ರಂಗಗಳಲ್ಲಿ ಗುರುತಿಸಿಕೊಂಡಿದ್ದಾರೆ. ಇತರರಿಗಿಂತ ನಾವೇನು ಕಡಿಮೆ ಇಲ್ಲ ನಮ್ಮ ಸಂಸ್ಕೃತಿ ಶ್ರೇಷ್ಠವಾದದ್ದು. ನಮ್ಮ ಸಮುದಾಯವು ಇತರ ಎಲ್ಲಾ ಸಮುದಾಯಗಳಂತೆ ತನ್ನದೇ ಆದ ಅನನ್ಯತೆಯನ್ನು ಹೊಂದಿದೆ ಎಂಬ ಬಾವನೆ ಇವರಲ್ಲಿ ಹುಟ್ಟಿಕೊಂಡಿದೆ.

## ಸಾಮಾಜಿಕ ರಚನೆ ಹಾಗೂ ಕೌಟುಂಬಿಕ ಪದ್ಧತಿ

ಒಂದೇ ಕಡೆ ನೆಲೆ ನಿಂತಿರುವ ಡೊಂಬರು ತಮ್ಮದೇ ಆದ ಸಮಾಜವನ್ನು ರಚಿಸಿಕೊಂಡಿದ್ದಾರೆ. ಇತರ ಸಮುದಾಯಗಳಂತೆ, ತಮ್ಮ ಸಮುದಾಯಲ್ಲಿಯೂ ಡೊಂಬರ ಹಿರಿಯ ನಾಯಕ ಇರುತ್ತಾನೆ ಎಂದು ಕೂಡ್ಲಿಗಿಯ ಡೊಂಬರ ರಾಮಣ್ಣ ಹೇಳುತ್ತಾರೆ. ಇವರ ಪ್ರಮುಖ ಕೆಲಸ, ಡೊಂಬರ ಮದುವೆ ಕಾರ್ಯಗಳು ಮತ್ತು ನ್ಯಾಯ ನಿರ್ಣಯಗಳನ್ನು ನಿಭಾಯಿಸಿಕೊಂಡು ಹೋಗುವುದಾಗಿದೆ. ಅಲ್ಲದೆ, ಗ್ರಾಮಪಂಚಾಯತಿ, ಪಟ್ಟಣ ಪಂಚಾಯಿತಿ ಸದಸ್ಯ ಆಯ್ಕೆ ಕುರಿತಾದ ಸಮಸ್ಯೆ ಎದುರಾದರೆ, ನಮ್ಮ ಸಮುದಾಯದಲ್ಲಿ ಒಬ್ಬ ಹಿರಿಯ ಮುಖಂಡನನ್ನು ನೇಮಕ ಮಾಡಿಕೊಂಡು ಅವನ ಸಮ್ಮುಖದಲ್ಲಿ ಯಾರನ್ನು ಆರಿಸಬೇಕು ಎಂದು ನಿರ್ಣಯ ತೆಗೆದುಕೊಳ್ಳುತ್ತಾರೆ.

ಹೀಗೆ, ಯಾರಾದರೂ ಗುಡಿಸಿಲಿನಲ್ಲಿ ವಾಸ ಮಾಡುವಂತವರಿಗೆ ಆಶ್ರಯ ಮನೆ ಕೊಡಿಸುವ ಪ್ರಯತ್ನ ಹಿರಿಯ ನಾಯಕ ಮಾಡುತ್ತಾನೆ. ಹೀಗೆ, ಅನೈತಿಕ ಸಂಬಂಧದ ಕುರಿತಾದ, ವಿಚ್ಛೇದನ,

ಅಣ್ಣತಮ್ಮಂದಿರು ಆಸ್ತಿಪಾಸ್ತಿ ಹಂಚಿಕೊಳ್ಳುವಾಗ ಸಮುದಾಯದ ಹಿರಿಯರು ಹೇಳಿದಂತೆ ತಂದೆ ಆಸ್ತಿಯನ್ನು ಅವರು ಭಾಗ ಮಾಡಿಕೊಳ್ಳಬೇಕು. ಹೀಗೆ, ಡೊಂಬರ ಸಮಾಜದಲ್ಲಿ ಹಿರಿಯ ನಾಯಕನ ಪ್ರಮುಖ ಪಾತ್ರವಾಗಿರುತ್ತದೆ. ಇವರಲ್ಲಿ ಇಂದಿಗೂ ಅವಿಭಕ್ತ ಕುಟುಂಬ ಪದ್ಧತಿ ಇದೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ನನ್ನ ಗಮನಕ್ಕೆ ಬದಂತೆ ಕೂಡ್ಲಿಗಿಯಲ್ಲಿ ಭೀಮಪ್ಪನವರ ಕುಟುಂಬದಲ್ಲಿ ಇಪ್ಪತ್ತು ಜನರು ಈಗಲೂ ಕೂಡಿಯೇ ಇದ್ದಾರೆ. ಭೀಮಪ್ಪನವರು ಮೊಮ್ಮಕ್ಕಳು ಮತ್ತು ಮರಿಮೊಮ್ಮಕ್ಕಳನ್ನು ಕಂಡಿದ್ದಾರೆ. ಆದರೂ ಈಗಲೂ ಕೂಡಿಯೇ ಬಾಳುತ್ತಾರೆ. ಹಾಗೆ ಡಿ. ಬಬ್ರುವಾನ್ ಮಾರೆಪ್ಪನ ಕುಟುಂಬದಲ್ಲಿ ಇಪ್ಪತ್ಮೂರು ಸದಸ್ಯರು ಕೂಡಿಯೇ ಇದ್ದಾರೆ. ಇವರಲ್ಲಿ ನಾಲ್ಕು ಜನ ಗಂಡು ಮಕ್ಕಳಿಗೆ ಮದುವೆ ಆಗಿದೆ. ಇವರ ಮಕ್ಕಳಿಗೂ ಸಹ ಮದುವೆ ಆಗಿದೆ. ಹೀಗೆ ಕೂಡಿಬಾಳುವ ಇವರ ಜೀವನ ಸಹಕಾರ ಪ್ರೀತಿಯ ಸಂಕೇತವೆಂದು ಹೇಳಬಹುದು. ಮರಬನಹಳ್ಳಿಯಲ್ಲಿ ವಾಸಮಾಡುವ ಡೊಂಬರು ಅವಿಭಕ್ತಿ ಕುಟುಂಬ ಪದ್ಧತಿಗೆ ಕಾರಣ, ತಮಗೆ ವಾಸಮಾಡಲು ಮನೆಯಿಲ್ಲದಿರುವುದೇ ಆಗಿದೆಯೆಂದು ಹೇಳುತ್ತಾರೆ. ಈ ಕುಟುಂಬಕ್ಕೆ ಒಂದೇ ರೇಷನ್‌ಕಾರ್ಡ್ ಇದೆ. ಇದುವರೆಗೂ ಒಂದು ಆಶ್ರಯ ಮನೆ ಸೌಲಭ್ಯ ಕೂಡ ಸರ್ಕಾರವು ಕಲ್ಪಿಸಿಕೊಟ್ಟಿಲ್ಲವೆಂದು ಹೇಳುತ್ತಾರೆ. ಹೀಗೆ ಕೂಡ್ಲಿಗಿಯ ಡಿ. ಪ್ರಹ್ಲಾದ ಕುಟಂಬದಲ್ಲಿ ಹದಿನೆಂಟು ಜನ ಸದಸ್ಯರು ಕೂಡಿಯೇ ಇದ್ದಾರೆ. ಹಾಗೆ, ಕರ್ನಾಹಟ್ಟಿಯಲ್ಲಿ ಡಿ. ಹನುಮಂತ ಎನ್ನುವ ಕುಟುಂಬದಲ್ಲಿ ೨೦ ಮಂದಿ ಸದಸ್ಯರು ಕೂಡಿ ಬಾಳುತ್ತಾರೆ. ಇವರಲ್ಲಿ ನಾಲ್ಕುಮಂದಿ ಮದುವೆ ಆಗಿದೆ. ಆದರೂ ಇಂದಿಗೂ ಅವರು ಕೂಡಿಯೇ ಇದ್ದಾರೆ. ಬೂದುಗುಪ್ಪ ಡಿ. ಈರಣ್ಣನವರ ಕುಟುಂಬದಲ್ಲಿ ಇಪ್ಪತ್ತೆರಡು ಮಂದಿ ಸದಸ್ಯರು ಇಂದಿಗೂ ಅವಿಭಕ್ತ ಕುಟುಂಬದಲ್ಲಿ ಕೂಡಿ ಜೀವನ ಸಾಗಿಸುತ್ತಿದಾರೆ. ಹೀಗೆಯೇ ನಾನು ಹತ್ತಕ್ಕೂ ಅಧಿಕ ಅವಿಭಕ್ತ ಕುಟುಂಬಗಳನ್ನು ಗುರುತಿಸಿದ್ದೇನೆ. ಈ ಅವಿಭಕ್ತ ಕುಟುಂಬಗಳು ಈಗಲೂ ಮುಂದುವರೆಯುತ್ತಿರುವುದಕ್ಕೆ ಹಲವಾರು ಕಾರಣಗಳನ್ನು ಗುರುತಿಸಲಾಗಿದೆ. ಮೊದಲನೆಯದಾಗಿ, ಅವರಲ್ಲಿರುವ ಅಪಾರವಾದ ಆತ್ಮವಿಶ್ವಾಸ, ಪರಸ್ಪರ ನಂಬಿಕೆ ಹಾಗೆಯೇ ಮುಂದುವರೆಯುತ್ತಿರುವುದು, ಮನೆಯ ಹಿರಿಯ ತಂದೆಗೆ ಅಥವಾ ಯಜಮಾನಿಗೆ ಮಾರ್ಗದರ್ಶನದಂತೆ, ತಗ್ಗಿಬಗ್ಗಿ ನಡೆಯುವುದು ಯಜಮಾನನ ಮಾತಿಗೆ ತಿರುಗಿ ಉತ್ತರ ನೀಡದಿರುವುದು ಸಂಪ್ರದಾಯ ಮತ್ತು ನಂಬಿಕೆಗಳನ್ನು ಹಾಗೆ ಮುಂದುವರೆಸಿಕೊಂಡು ಬಂದಿರುವುದಾಗಿದೆ.

ಎರಡನೆಯದಾಗಿ, ಅವಿಭಕ್ತ ಕುಟುಂಬ ಕೂಡಿ ಬಾಳುವುದಕ್ಕೆ ಪ್ರಮುಖ ಕಾರಣ ಆ ಕುಟುಂಬಗಳಲ್ಲಿ ಬೇರೆಯಾಗಬೇಕು ಅನ್ನುವ ತವಕ ಮನೆಯಲ್ಲಿ ಎಲ್ಲರಿಗೂ ಇದ್ದೆ ಇರುತ್ತದೆ. ಆದರೆ ಬೇರೆ ಹೋಗೋಣವೆಂದರೆ ಸ್ವತಃ ಜೀವನ ಸಾಗಿಸಲು ನಿವೇಶನ ಮತ್ತು ಮನೆ, ಸಮಸ್ಯೆ ಬಹುದೊಡ್ಡ ತೊಂದರೆಯಾಗಿದೆ. ಅವಿಭಕ್ತ ಕುಟುಂಬ ಮನೆಗಳು ಬಹಳ ಚಿಕ್ಕವು ಆಗಿವೆ. ಇಂಥ ಚಿಕ್ಕ ಮನೆಯಲ್ಲಿ

ಇಪ್ಪತ್ತು ಜನ ಸದಸ್ಯರು ದಿನಂಪ್ರತಿ ಮಲುಗಲು, ಯಾರಾದರೂ ಬಂಧುಬಳಗ ಬಂದಾಗಲಂತೂ, ಇನ್ನೂ ತುಂಬಾ ತೊಂದರೆಯಾಗುತ್ತದೆ. ಹಾಗಾಗಿ ಸರ್ಕಾರವು ಇಂಥ ಅವಿಭಕ್ತ ಕುಟುಂಬಗಳನ್ನು ಗುರುತಿಸಿ, ಇಂಥ ಸಮಸ್ಯೆಗಳನ್ನು ಬಗೆಹರಿಸುವ ಕಡೆ ಗಮನಹರಿಸಿದರೆ ಇಂತ ಅವಿಭಕ್ತ ಕುಟುಂಬಗಳು ಹಾಗೆ ಮುಂದುವರೆಯಲು ಸಾಧ್ಯವಿಲ್ಲ. ಡೊಂಬರಲ್ಲಿ ಇಂಥ ಅವಿಭಕ್ತ ಕುಟುಂಬಗಳು, ಅಧಿಕವಾಗಿವೆ ಎಂಬ ವಿಚಾರವನ್ನು ಕ್ಷೇತ್ರಕಾರ್ಯದ ಮೂಲಕ ನಮೂದಿಸುವ ಪ್ರಯತ್ನ ಮಾಡಿದ್ದೇನೆ.

□□

**ಟಿಪ್ಪಣಿಗಳು**

೧. ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ, ಎಂ.ಎನ್. ಜವರಯ್ಯ, ಪು.೩೭

೨. ಡೊಂಬರ ಸಂಸ್ಕೃತಿ, ದೇವೆಂದ್ರಕೂಮಾರ್ ಹಕಾರಿ, ಪು.೨

೩. ಡೊಂಬರ ಸಂಸ್ಕೃತಿ, ದೇವೆಂದ್ರಕೂಮಾರ್ ಹಕಾರಿ, ಪು.೬೧

೪. ಡೊಂಬರ ಸಂಸ್ಕೃತಿ, ದೇವೆಂದ್ರಕುಮಾರ ಹಕಾರಿ, ಪು.೬೧

೫. ಡೊಂಬರ ಸಂಸ್ಕೃತಿ, ದೇವೆಂದ್ರಕುಮಾರ ಹಕಾರಿ, ಪು.೬೨

೬. ಡೊಂಬರ ಸಂಸ್ಕೃತಿ, ದೇವೆಂದ್ರಕುಮಾರ ಹಕಾರಿ, ಪು.೬೨

೭. ಡೊಂಬರ ಸಂಸ್ಕೃತಿ, ದೇವೆಂದ್ರಕುಮಾರ ಹಕಾರಿ, ಪು.೬೪

೮. ಡೊಂಬರ ಸಂಸ್ಕೃತಿ, ದೇವೆಂದ್ರಕುಮಾರ ಹಕಾರಿ, ಪು.೬೩

೯. ವಕ್ತೃರು ಡೊಂಬರ ಭರಮಪ್ಪ ಕೂಡ್ಲಿಗಿ

೧೦. ಡೊಂಬರ ಸಂಸ್ಕೃತಿ, ದೇವೆಂದ್ರಕುಮಾರ ಹಕಾರಿ, ಪು.೩೮

೧೧. ಡೊಂಬರ ಸಂಸ್ಕೃತಿ, ದೇವೆಂದ್ರಕುಮಾರ ಹಕಾರಿ, ಪು.೬೩ ಮತ್ತು ೬೪

೧೨. ಡೊಂಬರ ಸಂಸ್ಕೃತಿ, ದೇವೆಂದ್ರಕುಮಾರ ಹಕಾರಿ, ಪು.೬೫

೧೩. ಗಿರಿಜನ ನಾಡಿಗೆ ಪಯಣ, ಹಿ.ಚಿ. ಬೋರಲಿಂಗಯ್ಯ, ಪು.೩೨

ಅಧ್ಯಾಯ ೩

# ಬದಲಾಗುತ್ತಿರುವ ಸಾಮಾಜಿಕ ಮತ್ತು ಆರ್ಥಿಕ ಸಂದರ್ಭಗಳು

ಭಾರತದಲ್ಲಿರುವ ಆದಿವಾಸಿಗಳು ಆಧುನಿಕ ನಾಗರಿಕತೆಯೊಂದಿಗೆ ಹೊಂದಿರುವ ಸಂಪರ್ಕದ ಬಗ್ಗೆ ಈ ರೀತಿ ಹೇಳಿದ್ದಾರೆ. "ನಾಗರೀಕ ಜನಾಂಗಗಳ ಮುಖವನ್ನು ನೋಡದೆ ಮತ್ತು ನಾಗರಿಕರ ಅಡ್ಡಿಆತಂಕಗಳಿಂದ ಬಾಧಿತರಾಗದೆ ಆದಿವಾಸಿಗಳು ಓಡಾಡಿಕೊಂಡಿರಬಹುದಾಗಿದ್ದ ಕಾಲವೊಂದಿತ್ತು. ರಕ್ಷಿತವಾದ ಆಶ್ರಯಧಾಮಗಳೆಂದಿದ್ದ ಗುಡ್ಡಗಾಡಗಳಲ್ಲಿ ಕಾಡುಮೇಡುಗಳಲ್ಲಿ ಓಡಾಡಿಕೊಂಡು ಹಣ್ಣುಹಂಪಲಗಳನ್ನು ತಿಂದುಕೊಂಡು ತಮ್ಮ ಸೊಂಟದ ಸುತ್ತ ಸೊಪ್ಪಿನ ಮಾಲೆ ಸುತ್ತಿಕೊಂಡು ಕುಣಿದಾಡುತ್ತಿದ್ದ ಹಲವಾರು ಆದಿವಾಸಿ ಸಮೂಹಗಳು ಇಂದು ಬಹುತೇಕ ನಾಗರಿಕ ಸಮುದಾಯಗಳ ಸಂಪರ್ಕಕ್ಕೆ ಬಂದಿವೆ."[೧] ಎಂದು ಡಿ. ಮುಜಂದಾರ್‌ರವರು ಹೇಳಿದ್ದಾರೆ. ಅಂತಹ ನೆರೆಹೊರೆಯ ಸಮುದಾಯದ ಜನರ ನಡತೆಯ ಲಕ್ಷಣಗಳನ್ನು ಕಲಿತುಕೊಂಡಿವೆ. ಅವರ ಉಡುಪಿನ ಮಾದರಿಗಳನ್ನು ಮತ್ತು ಅರ್ಥ ವ್ಯವಸ್ಥೆಯ ಅಂಶಗಳನ್ನು ತಮ್ಮಲ್ಲಿ ಅಳವಡಿಸಿಕೊಂಡಿವೆ. ಹೀಗಾಗಿ ಆದಿವಾಸಿಗಳ ಅಂಚಿನ ಸಮುದಾಯಗಳ ಬದುಕುಗಳಲ್ಲಿ ಆಧುನಿಕತೆಯೆಂಬುದು ಹಲವು ಬದಲಾವಣೆಗಳನ್ನು ತಂದಿದೆ. ಅಲ್ಲದೆ ಹಲವು ವಿರೂಪಗಳನ್ನು ಈ ಬದಲಾವಣೆಯು ಸೃಷ್ಟಿಸಿದೆ. ಬದಲಾದ ಸಂದರ್ಭಕ್ಕೆ ಹೊಂದಿಕೊಳ್ಳುವಲ್ಲಿ ಸಮುದಾಯಗಳು ಹಲವು ಬಗೆಯ ಸಂಘರ್ಷಗಳಿಗೆ ಮುಖಾಮುಖಿಯಾಗುತ್ತಲೇ ಬಂದಿವೆ.

ನಿರಂತರವಾಗಿ ಅಲೆಮಾರಿಗಳಾಗಿದ್ದ ಡೊಂಬರು ಇಂದು ಬದಲಾಗುತ್ತಿರುವ ಜಾಗತಿಕ ವಿದ್ಯಮಾನಗಳಿಗೆ ತಮ್ಮನ್ನು ಹೊಂದಿಸಿಕೊಳ್ಳಲು ಹೆಣಗುತ್ತಿದ್ದಾರೆ. ತೃತೀಯ ಜಗತ್ತಿನಲ್ಲಿ ನಡೆದುಹೋದ ಕೈಗಾರಿಕೀಕರಣದಿಂದಾಗಿ ಇಲ್ಲಿನ ಸಮುದಾಯಗಳ ದೇಶೀಯ ಮೂಲವೃತ್ತಿಗಳು ಸಂಪೂರ್ಣ ಕಣ್ಮರೆಯಾದವು. ಗುಡಿಕೈಗಾರಿಕೆಗಳು, ದೇಶೀಯ ತಂತ್ರಜ್ಞಾನ, ಸ್ಥಳೀಯ ಕೌಶಲಗಳು ಇನ್ನಿಲ್ಲದಂತಾದವು. ಹೀಗೆಯೇ ಡೊಂಬರ ಮೂಲವೃತ್ತಿಯಾದ ಡೊಂಬರಾಟವು ಸಹ, ಕಣ್ಮರೆಯಾಗಿದ್ದರಿಂದ, ವಿಧಿಯಿಲ್ಲದೆ, ಇವರು ಬದಲಾಗುತ್ತಿರುವ ವಿದ್ಯಮಾನಗಳಿಗೆ ಸಹಜವಾಗಿಯೇ ಹೊಂದಿಕೊಳ್ಳಬೇಕಾಯಿತು. ಜೊತೆಗೆ ಅಲೆಮಾರಿತನ

ವನ್ನು ಕೂಡ ಸಂಪೂರ್ಣವಾಗಿ ಬಿಟ್ಟುಕೊಟ್ಟು ಒಂದೇ ಕಡೆ ನೆಲೆಯೂರಿ ಬದುಕಲು ಶುರು ಮಾಡಿದರು. ಇದು ಈ ಸಮುದಾಯದ ಮಹತ್ತರ ಬದಲಾವಣೆಗಳಲ್ಲೊಂದಾಗಿದೆ. ಸಮುದಾಯದ ಸಾಂಪ್ರದಾಯಿಕ ಮೂಲವೃತ್ತಿ ಡೊಂಬರಾಟವನ್ನು ಸಂಪೂರ್ಣವಾಗಿ ತೊರೆದು, ಆ ವೃತ್ತಿಯ ಬದಲಾಗಿ ಇಂದಿನ ಇತರೆ ಹಲವಾರು ಕಸಬುಗಳಲ್ಲಿ ತೊಡಗಿಸಿಕೊಂಡಿರುವುದೇ ಈ ಸಮುದಾಯದ ಅತಿ ದೊಡ್ಡ ಬದಲಾವಣೆಯಾಗಿದೆ.

ಈ ಹಿಂದಕ್ಕೆ ಸಮುದಾಯವು ತನ್ನ ಮೂಲವೃತ್ತಿಯಾದ ಡೊಂಬರಾಟವನ್ನು ಅವಲಂಬಿಸಿ ಅಲೆಮಾರಿಗಳಾಗಿದ್ದಾಗ ಸಾಮಾಜಿಕ ಅವಮಾನಗಳನ್ನು ಉಂಡು ಬದುಕುತ್ತಿದ್ದರು. ಆದರೆ ಇಂದು ಮೂಲವೃತ್ತಿಯನ್ನು ಬಿಟ್ಟಿದ್ದರಿಂದಾಗಿ ಸಾಮಾಜಿಕ ಅವಮಾನಗಳು ಕಡಿಮೆಯಾಗಿವೆ. ಮತ್ತು ಇತರ ಸಮುದಾಯಗಳ ಮಧ್ಯೆ ಹೊಂದಿಕೊಂಡು ಜೀವನ ನಡೆಸುತ್ತಿದ್ದಾರೆ. ಆದರೆ ನಿಶ್ಚಿತ ಆದಾಯ ಮೂಲಗಳಿಲ್ಲದೆ ಈ ಸಮುದಾಯ ದಿಕ್ಕೆಟ್ಟು ಹೋಗಿದೆ. ಹೀಗೆ ಸಮುದಾಯವು ಯಾವುದನ್ನು ಬಿಡಬೇಕಾಗಿದೆ ಮತ್ತು ಯಾವುದನ್ನು ಅನುಸರಿಸಬೇಕಾಗಿದೆ ಎಂಬ ಸಂಗತಿಯನ್ನು ಜಾಗತಿಕ ವಿದ್ಯಮಾನಗಳೇ ನಿರ್ಧರಿಸುತ್ತವೆ.

ದೇಶೀಯ ಬಹುರೂಪಿ ಕೌಶಲಗಳನ್ನು ನುಂಗಿ ಹಾಕಿದ ಯುರೋಪಿನ ಅಬ್ಬರದ ಕೈಗಾರಿಕಾ ನೀತಿಯು ಭಾರತದ ಈ ಬಗೆಯ ಸಮುದಾಯಗಳಲ್ಲಿ ಹಲವು ತಲ್ಲಣಗೊಳನ್ನೇ ಹುಟ್ಟುಹಾಕಿತು. ಆಧುನಿಕತೆಯು ಭಾರತದ ಕೆಳಜಾತಿಗಳಲ್ಲಿ ಹಲವು ಕ್ರಾಂತಿಕಾರಿ ಬದಲಾವಣೆಗಳನ್ನು ತಂದಿತು ಎಂಬ ಮಾತು ಅರ್ಧ ಸತ್ಯ. ಏಕೆಂದರೆ ಆಧುನಿಕತೆಯೆಂಬುದು ಕೈಗಾರಿಕೀರಣದ ಜೊತೆ ಅನುಷಂಗಿಕವಾಗಿ ಬಂದ ಸಂಗತಿಯೇ ಆಗಿದೆ ಮತ್ತು ಆಧುನಿಕತೆಯಲ್ಲಿ ಈ ದೇಶದ ಶೋಷಿತ ಸಮುದಾಯಗಳ ವಿಮೋಚನೆಗಾಗಿಯೇ ರೂಪಗೊಂಡ ಯಾವ ಹತಾರುಗಳು ಇರಲಿಲ್ಲ. ಆಧುನಿಕತೆಯಿಂದ, ಮುಕ್ತವಾದ ಆರ್ಥಿಕ ಚಲನೆಗಳಿಂದ ಪ್ರಯೋಜನವಾಗಿದ್ದು, ಭಾರತದ ಯಜಮಾನವರ್ಗಕ್ಕೆ ಮಾತ್ರ. ಕೈಗಾರೀಕರಣದಿಂದ ಪ್ರಚ್ಛನ್ನಗೊಂಡ ಬಂಡವಾಳಶಾಹಿ ವ್ಯವಸ್ಥೆ ದುಡಿವ ವರ್ಗಗಳ ಶ್ರಮವನ್ನು ಉಪಯೋಗಿಸಿಕೊಂಡು ಬಂಡವಾಳವನ್ನು ದ್ವಿಗುಣಗೊಳಿಸಿಕೊಂಡಿತು. ಆದರೆ ಕೈಗಾರಿಕೀರಣವು ಭಾರತದ ಒಟ್ಟು ದೇಶೀ ಮಾದರಿಯ ಉತ್ಪಾದನೆಗಳನ್ನು ಇಲ್ಲವಾಗಿಸಿತು. ಜೊತೆಗೆ ಇಲ್ಲಿ ಸಾಮಾಜಿಕ ಬದುಕಲ್ಲಿ ಅನೇಕ ಬದಲಾವಣೆಗಳು ಸಹಜವಾಗಿಯೇ ಘಟಿಸಿಹೋದವು. ಈ ಕೈಗಾರಿಕೀಕರಣದ ಬೀಸು ಹೊಡೆತದಿಂದ ಇಲ್ಲಿನ ಆಳುವ ವರ್ಗವೇ ವಿಚಲಿತವಾದ ಮೇಲೆ ದುಡಿವವರ್ಗಗಳು ಸಹಜವಾಗಿಯೇ ತಮ್ಮಲ್ಲಿ ಹಲವು ಬದಲಾವಣೆಗಳನ್ನು ತಂದುಕೊಳ್ಳಬೇಕಾಯಿತು. ಮೊದಲು ಇಲ್ಲಿ ಅಘಾತಗೊಂಡಿದ್ದು, ದೇಶೀ ತಂತ್ರಜ್ಞಾನ ಮತ್ತು ಅದರ ಮೂಲಕವೇ ಉತ್ಪಾದನೆಯಲ್ಲಿ ನಿರತವಾಗಿದ್ದ ಇಲ್ಲಿನ ಹಲವು ಸಮುದಾಯಗಳು. ಗುಡಿಕೈಗಾರಿಕೆಗಳು ಅನಿವಾರ್ಯವಾಗಿ ಮೂಲೆಗುಂಪಾಗಲೇ

ಬೇಕಾಯ್ತು. ಆಗ ದೇಶೀ ತಂತ್ರಜ್ಞಾನ ಮತ್ತು ಅದನ್ನು ರೂಪಿಸಿದ ಸಮುದಾಯ ಮತ್ತು ಸ್ಥಳೀಯ ಉತ್ಪಾದನಾ ವ್ಯವಸ್ಥೆಗಳು ದಿಕ್ಕೆಟ್ಟು ಹೋದವು.

ಅಲೆಮಾರಿಗಳ ಪಾಡು ಇನ್ನೂ ಶೋಚನೀಯವಾಯಿತು. ಡೊಂಬರಂಥ ಅಲೆಮಾರಿಗಳು ತಮ್ಮ ಪಾರಂಪರಿಕ ವೃತ್ತಿಯನ್ನು ಬಿಟ್ಟುಕೊಡಲೇಬೇಕಾಯ್ತು. ಯುರೋಪ್, ರಷ್ಯಾ ಕಡೆಗಳಿಂದ ಬಂದ ದೊಡ್ಡ ದೊಡ್ಡ ಸರ್ಕಸ್ ಕಂಪನಿಗಳು ಇಲ್ಲಿನ ಪಾರಂಪರಿಕ ಡೊಂಬರಾಟವನ್ನು ನಾಶಮಾಡಿದವು. ಸರ್ಕಸ್‌ಗಳ ಬಹುದೊಡ್ಡ ಪ್ರಭಾವದ ಮುಂದೆ ಡೊಂಬರಾಟ ನಗೆಪಾಟಲಿನ ಸಂಗತಿಯಾಯಿತು. ಕ್ರಮೇಣ ಡೊಂಬರು ತಮ್ಮ ಮೂಲ ವೃತ್ತಿಯನ್ನು ಬಿಟ್ಟುಕೊಡಲೇಬೇಕಾಯ್ತು. ನಿಶ್ಚಿತ ಆದಾಯದ ಮೂಲಕವೇ ನಾಶವಾದ ಮೇಲೆ ಡೊಂಬರು ಅನೇಕ ಕಡೆ ಚದುರಿ ಚಿಕ್ಕಪುಟ್ಟ ಉದ್ಯೋಗಗಳನ್ನು ರೂಢಿಸಿಕೊಳ್ಳಲು ಹೆಣಗಿದರು. ಕೈಗಾರೀಕರಣದ ಸಂದರ್ಭ ಡೊಂಬರ ಬದುಕಲ್ಲೂ ಈ ಬಗೆಯ ವಿಕ್ಷಿಪ್ತ ಬದಲಾವಣೆಗಳನ್ನು ತಂದಿತು.

ಮುಂದುವರೆದ ನಾಗರೀಕ ಜನಗಳು ಅನೇಕ ಕಸುಬುಗಳಲ್ಲಿ ತೊಡಗಿಸಿಕೊಂಡಿರುವಂತೆಯೇ, ಇಂದು ಬದಲಾಗುತ್ತಿರುವ ಸಂದರ್ಭಕ್ಕೆ ತಕ್ಕಂತೆ ಡೊಂಬರ ಸಮುದಾಯವು ಕೂಡ ಹಲವಾರು ಕಸುಬುಗಳಲ್ಲಿ ತೊಡಗಿಸಿಕೊಂಡಿದೆ. ಉದಾ. ಕೃಷಿಕರಾಗಿದ್ದಾರೆ, ಚಿಕ್ಕಪುಟ್ಟ ವ್ಯಾಪಾರಗಳನ್ನು ಮಾಡಿಕೊಂಡಿದ್ದಾರೆ. ಖಾಸಗಿ ಕಂಪನಿಯಲ್ಲಿ ದುಡಿಯುತ್ತಿದ್ದಾರೆ. ಹಲವು ಸಾಕುಪ್ರಾಣಿಗಳಾದ ಕುರಿ, ಮೇಕೆ, ಆಕಳು, ಎಮ್ಮೆ ಮುಂತಾದ ಪ್ರಾಣಿಗಳನ್ನು ಸಹ ಸಾಕುತ್ತಿದ್ದಾರೆ. ಇನ್ನೂ ಕೆಲವೇ ಕೆಲವರು ಶಾಲಾಕಾಲೇಜುಗಳನ್ನು ಸೇರಿ ಪದವೀಧರರಾಗಿ ಸ್ನಾತಕೋತ್ತರ ಪದವಿಗಳನ್ನು ಪಡೆದು ಕೆಲವರು ಉನ್ನತ ಹುದ್ದೆಗಳನ್ನು ಪಡೆದುಕೊಂಡಿದ್ದಾರೆ. ಆದರೆ ಒಟ್ಟಾರೆಯಾಗಿ ಆಧುನಿಕ ಜಗತ್ತಿನ ಒಟ್ಟು ಚಲನೆಗೆ ಡೊಂಬರು ನಿಧಾನಕ್ಕೆ ಹೊಂದಿಕೊಳ್ಳಲು ಯತ್ನಿಸುತ್ತಿದ್ದಾರೆ. ಆದರೆ ನಿಶ್ಚಿತ ಆದಾಯದ ಮೂಲವೇ ಇಲ್ಲದೆ ಇವರ ಹಣಕಾಸಿನ ಸ್ಥಿತಿ ಶೋಚನೀಯವಾಗಿದೆ. ಆದರೆ ಇಂದಿನ ಜಾಗತಿಕ ವಿದ್ಯಮಾನಗಳೇ ವಿಚಿತ್ರವಾಗಿವೆ. ಜಾಗತೀಕರಣದ ಈ ಅಬ್ಬರದ ಸಂದರ್ಭದಲ್ಲಿ ಡೊಂಬರು ಯಾವ ಬಗೆಯಲ್ಲಿ ವರ್ತಮಾನಕ್ಕೆ ಮುಖಾಮುಖಿಯಾಗುತ್ತಿದ್ದಾರೆ ಎಂಬುದೇ ಮಹತ್ವದ ಪ್ರಶ್ನೆಯಾಗಿದೆ.

ಯಾವಾಗಲೂ ಸಮುದಾಯ ಮತ್ತು ಸಮಾಜ ಕೂಡ ಒಂದೇ ಕಡೇ ನಿಲ್ಲುವುದಿಲ್ಲ. ಅದು ನಿರಂತರವಾಗಿ ಸದಾ ಹರಿಯುವ ನದಿಯಂತೆ. ಸಮುದಾಯ ಮತ್ತು ಸಮಾಜ ಕೂಡ, ಚಲನಶೀಲ ವಾಗಿರುತ್ತದೆ. ಹಾಗೆ ಸಮುದಾಯವು ಕೂಡ ಹೊಸ ಹೊಸ ಕಸುಬುಗಳಿಗೆ ಮತ್ತು ಹೊಸ ವಿಚಾರಗಳಿಗೆ ಬದಲಾವಣೆಗೊಳಪಡುತ್ತಲೇ ಇರುತ್ತದೆ. ಸಮುದಾಯವು ಬದಲಾವಣೆಯ ಹಾದಿ ತುಳಿದಿದ್ದರ ಫಲವಾಗಿ ಶಿಕ್ಷಣದಲ್ಲಿ ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ ಶೇ. ೫೫ ರಷ್ಟು ಜನರು ಅಕ್ಷರಸ್ಥರಾಗಿದ್ದಾರೆ.

ಹಿಂದಕ್ಕೆ ಸಮುದಾಯವು ಆರೋಗ್ಯಕ್ಕೆ ಸಂಬಂಧಿಸಿದಂತೆ ಇವರಲ್ಲಿಯೇ ಕಂಡುಕೊಂಡ ಗಿಡಮೂಲಿಕೆ ಔಷಧಗಳನ್ನು ಬಳಸಿಕೊಳ್ಳುತ್ತಿದ್ದರು. ಆದರೆ ಇವತ್ತಿನ ಬದಲಾವಣೆಯ ಜಗತ್ತಿನ ಸಂದರ್ಭಕ್ಕೆ ತಕ್ಕಂತೆ ಈ ಸಮುದಾಯವು ಆಧುನಿಕ ಔಷಧಗಳ ಪ್ರಭಾವಕ್ಕೆ ಮಾರುಹೋಗಿದೆ. ಹೀಗೆ ಮುಂದುವರೆಯುತ್ತಿರುವ ಜಗತ್ತಿನೊಂದಿಗೆ ತನ್ನಷ್ಟನ್ನು ತಾನು ಗುರುತಿಸಿಕೊಳ್ಳಲು ಈ ಸಮುದಾಯ ಪ್ರಯಾಸ ಪಡುತ್ತಿದೆ.

ಹಿಂದಕ್ಕೆ "ಡೊಂಬರ ಸಮುದಾಯದಲ್ಲಿ ದೇವರ ಹೆಸರಿನಲ್ಲಿ ದೇವದಾಸಿ ಪದ್ಧತಿ ಆಚರಣೆಯಲ್ಲಿತ್ತು."[೨] ಆದರೆ ಇಂದಿನ ಬದಲಾಗುತ್ತಿರುವ ಸಂದರ್ಭದಲ್ಲಿ ಈ ದೇವದಾಸಿ ಆಚರಣೆಯನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದಾರೆ. ಇಂದು ಡೊಂಬರು ತಮ್ಮ ಜಾತಿಯ ಹೆಸರನ್ನು ಧೈರ್ಯವಾಗಿ ಹೇಳಿಕೊಳ್ಳುತ್ತಾರೆ. ಹಿಂದೆ ಇದ್ದಂತೆ ಸಾಮಾಜಿಕ ಅವಮಾನಗಳು ಕಡಿಮೆ ಆಗುತ್ತಿವೆ. ತಮ್ಮ ಸಮುದಾಯದ ಅಭಿವೃದ್ಧಿಗಾಗಿ ಮತ್ತು ಸಮಸ್ಯೆಗಳನ್ನು ನಿವಾರಿಸಿಕೊಳ್ಳಲು ಡೊಂಬರು ಜಾತಿ ಸಂಘಟನೆಯನ್ನು ಸಹ ಕಟ್ಟಿಕೊಂಡಿದ್ದಾರೆ. ಇದರ ಮೂಲಕ ತಮ್ಮ ಹಕ್ಕುಗಳು ಪಡೆಯಲು ಹೋರಾಡಲು ಅಣಿಯಾಗುತ್ತಿದ್ದಾರೆ. ಇಂದು ಡೊಂಬರು ಸಹ ನಿಧಾನವಾಗಿ ರಾಜಕೀಯದಲ್ಲಿ ಪ್ರವೇಶ ಮಾಡುತ್ತಿದ್ದಾರೆ. ಇವು ಬದಲಾಗುತ್ತಿರುವ ಸಂದರ್ಭದಲ್ಲಿ ಸಮುದಾಯ ಇಡುತ್ತಿರುವ ಹೊಸ ಹೆಜ್ಜೆಗಳಾಗಿವೆ.

ಡೊಂಬರ ಸಮುದಾಯದಲ್ಲಿ ಎರಡು ತಲೆಮಾರಿನ ವ್ಯಕ್ತಿಗಳು ಕಾಣಸಿಗುತ್ತಾರೆ. ಮೊದಲನೆಯವರು ಬಹುಪಾಲು ಅನಕ್ಷರಸ್ಥ ಹಿರಿಯ ತಲೆಮಾರಿನವರು, ಎರಡನೆಯ ತಲೆಮಾರಿನವರು ಅಲ್ಪಸಂಖ್ಯಾತ ವಿದ್ಯಾವಂತ ತಲೆಮಾರಿನವರು. ಈ ಎರಡು ತಲೆಮಾರಿನವರಲ್ಲಿ ಸಾಕಷ್ಟು ವಿಚಾರಗಳಲ್ಲಿ ಸಮ್ಮತಿ ಇರುವುದಿಲ್ಲ. ಇವರ ನಡುವೆ ವಿಷಯ ವಿಚಾರ ತರ್ಕಗಳಲ್ಲಿ ಭಿನ್ನತೆ ಇದೆ. ಈ ಭಿನ್ನತೆಯನ್ನು ನೋಡುವುದಾದರೆ ಹಿರಿಯ ಅಥವಾ ಅನಕ್ಷರಸ್ಥ ತಲೆಮಾರಿನವರು ಇವರು ಬಹುಪಾಲು ಕೂಲಿ ಮತ್ತು ಜೀತವನ್ನು ಮಾಡುತ್ತಾರೆ. ಇದರಿಂದಲೇ ಜೀವನವನ್ನು ಸಾಗಿಸುತ್ತಾರೆ. ಇವರಿಗೆ ಆಧುನಿಕ ಜಗತ್ತಿನ ವ್ಯವಹಾರಿಕ ಜ್ಞಾನ ಕಡಿಮೆ. ಇವರು ಸಂಪ್ರದಾಯಸ್ಥರು, ಆಚರಣೆ ಲೋಕರೂಢಿಗಳನ್ನು ಪರಿಪಾಲಿಸುತ್ತಾ ಬಂದವರು. ಪಟ್ಟಭದ್ರ ಹಿತಾಸಕ್ತಿಯನ್ನು ಒಪ್ಪಿಕೊಂಡು ಬದುಕುವಂತವರು. ಸಮಾಜದಲ್ಲಿ ಇರುವ ಶ್ರೇಣೀಕೃತ ವ್ಯವಸ್ಥೆಯನ್ನು ತಪ್ಪೆಂದೂ ಇದರಿಂದ ತಮಗೆ ಅನ್ಯಾಯವಾಗುತ್ತದೆ ಎಂದೂ ಇದು ನಮ್ಮ ಹಕ್ಕೆಂದು ಕೇಳುವ ಆದಿವಾಸಿ ಹೊಂದಿದವರು. ಇವರಿಗೆ ಯಾವ ಸಂಘಟನೆಗಳ ಬಗ್ಗೆ ಅಷ್ಟಾಗಿ ವಿಶ್ವಾಸವಿಲ್ಲ. ಇವರ ವಿಚಾರಗಳೇ ನಂಬಿಕೆಗಳಲ್ಲಿ ಮತ್ತು ತಮ್ಮ ತಿಳುವಳಿಕೆಯಲ್ಲಿ ತಮ್ಮ ಊರು ಬಡವಾಣಿ ಯಜಮಾನ ತನ್ನ ಕೆಲಸ, ತನ್ನ ಊರು ದೇವರ ತನ್ನ ಮನೆ ದೇವರುಗಳ ಮೇಲೆ ನಂಬಿಕೆ ಇರುತ್ತದೆ. ಹಾಗೆಯೇ ಅವುಗಳ ಹಿಂದಿನಿಂದ ನಡೆದು ಬಂದದ್ದರ ಮೇಲೆ ಅತಿಯಾದ ವಿಶ್ವಾಸವನ್ನೇ ಇಟ್ಟುಕೊಂಡಿರುತ್ತಾರೆ. ತಾವು ಕೈಗೊಂಡು ನಡೆಸುತ್ತಿರುವ ಕೆಲಸಗಳ ಬಗ್ಗೆ, 'ನಾವು ಪಡೆದುಕೊಂಡು'

ಬಂದುದೆಂಬ ದೃಢಸಂಕಲ್ಪವನ್ನು ಹೊಂದಿರುತ್ತಾರೆ. ಆದ್ದರಿಂದ ಇವರು ಸಾಮಾನ್ಯವಾಗಿ ಆಗಲೇ ರೂಢಿಯಲ್ಲಿರುವ ಸಾಂಪ್ರದಾಯ ನಂಬಿಕೆ ಆಚರಣೆಗಳನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ.

ಎರಡನೆ ತಲೆಮಾರಿನವರು ಇಪ್ಪತ್ತು ವರ್ಷಗಳಿಂದೀಚೆಗೆ ಕಂಡುಬರುವಂತಹ ಯುವಕರು. ಶಿಕ್ಷಣವನ್ನು ಪಡೆದಂತವರು ಶಿಕ್ಷಣದಿಂದಲೇ ಜ್ಞಾನ ಬರುತ್ತದೆ ಮತ್ತು ಬದಲಾವಣೆಗಳು ಸಾಧ್ಯ ಎಂದು ನಂಬಿದವರು. ಬಹುತೇಕ ನಾಸ್ತಿಕರು, ಸಮುದಾಯದ ಸಂಘಟನೆಯ ವಿಚಾರಗಳನ್ನು ತಿಳಿದವರು. ಶಿಕ್ಷಣವೇ ತಮ್ಮ ಜನಾಂಗಕ್ಕೆ ವಿಮೋಚನೆಯ ದಾರಿ ತೋರಿಸುತ್ತದೆಯೆಂದು ನಿನಬಿದವರು. ಜಾತೀಯತೆಯನ್ನು ಪ್ರಬಲವಾಗಿ ವಿರೋಧಿಸುವಂತಹವರು. ಸಮಾಜದ ಶ್ರೇಣೀಕೃತ ವ್ಯವಸ್ಥೆಯನ್ನು ಸಂಪೂರ್ಣವಾಗಿ ಅಲ್ಲಗಳೆಯುವವರು. ನಗರಪ್ರದೇಶದ ಸಂಪರ್ಕವನ್ನು ಉಳ್ಳವರು. ತಮ್ಮ ಹಿರಿಯ ತಲೆಮಾರಿನ ಒಟ್ಟು ದುಡಿಮೆಯನ್ನು ಅವರಿಗೆ ಆದ ಅನ್ಯಾಯ ಅಕ್ರಮ ಅತ್ಯಾಚಾರಗಳನ್ನು ನೆನಪಿನಲ್ಲಿಟ್ಟುಕೊಂಡೇ ವರ್ತಮಾನಕ್ಕೆ ಇವರು ಮುಖಾಮುಖಿಯಾಗುತ್ತಿದ್ದಾರೆ.

ಈ ಹೊತ್ತಿನ ನಿರುದ್ಯೋಗದ ಸಮಸ್ಯೆಯಲ್ಲಿ ಬೆಂದ ಇವರು ತಮ್ಮ ಜಾತಿಯ ಬಗ್ಗೆ ಮೇಲುಜಾತಿಯವರು ಹೊಂದಿರುವ ನಿಲವನ್ನು ಖಂಡಿಸುವ ನೆಲೆಯಲ್ಲೇ ಇವರಿದ್ದಾರೆ. ಗ್ರಾಮೀಣ ಬದುಕಿನಲ್ಲಿನ ತಾರತಮ್ಯಕ್ಕೆ ಬೇಸತ್ತು ನಗರದ ಆಧುನಿಕ ಇಕ್ಕಟ್ಟಿನಲ್ಲಿ ಸಿಕ್ಕಿದರು, ಈ ತಲೆಮಾರಿನವರು. ಆಫೀಸು ಕಛೇರಿಯ ಸಂಪರ್ಕವನ್ನು ಹೊಂದಿದ್ದಾರೆ. ತಮ್ಮ ಸಮುದಾಯಕ್ಕೆ ಸರ್ಕಾರದಿಂದ ಬರುವ ಸೌಲಭ್ಯಗಳನ್ನು ಕೇಳಿ ಪಡೆಯುವ ಕಾರ್ಯದಲ್ಲಿರುತ್ತಾರೆ. ಇವರು ಊರ ಪಾರಂಪರಿಕ ಯಜಮಾನಿಕೆಯನ್ನು ವಿರೋಧಿಸುತ್ತಾರೆ. ಅವರ ಮನೆಯ ಕೂಲಿಯನ್ನು ಜೀತವೆನ್ನು ವಿರೋಧಿಸುತ್ತಾರೆ. ಇವರು ಮೊದಲು ಶಿಕ್ಷಣ ಪಡೆದು ನೌಕರಿಗಾಗಿ ಕಾಯುವುದು, ಸಿಗದಿದ್ದರೆ ಅನುಭವಿಸಲಾರದಂತ ನಿರುದ್ಯೋಗವನ್ನು ಅನುಭವಿಸಿ ಆರ್ಥಿಕ ಬಿಕ್ಕಟ್ಟು ಮತ್ತು ಅದರಿಂದಾಗುವ ಸಾಂಸಾರಿಕ ತೊಳಲಾಟವನ್ನೆ ಅನುಭವಿಸುತ್ತಾರೆ. ಇವರು ಶಿಕ್ಷಣ ಪಡೆಯುವುದು ಬರೀ ಜ್ಞಾನಾರ್ಜನೆಗೆ ಮಾತ್ರವಲ್ಲ. ಅಷ್ಟೇ ಪ್ರಮುಖವಾದಂತ ಸರ್ಕಾರಿ ನೌಕರಿಯನ್ನೆ ಪಡೆಯಲು ಶಿಕ್ಷಣವನ್ನು ಪಡೆಯುತ್ತಾರೆ.

ಪ್ರಸ್ತುತ ದಿನಗಳಲ್ಲಿ ಸಮುದಾಯದಲ್ಲಿ ಹಂತದಲ್ಲಿ ಯುವಪೀಳಿಗೆಯು ವಿದ್ಯಾವಂತರಾಗುತ್ತಿದ್ದಾರೆ. ಇವರಿಗೆ ಸಿಗದ ಉದ್ಯೋಗ, ಇರದ ಭೂಮಿ ಮತ್ತು ಬಂಡವಾಳ ತೊಡಕನ್ನು ನಿರ್ಮಿಸುತ್ತಿದೆ. ವಿದ್ಯಾವಂತರು ಗ್ರಾಮಗಳಿಂದ ನಗರಕ್ಕೆ ವಲಸೆ ಬರುತ್ತಿದ್ದಾರೆ. ಬಂಡವಾಳಶಾಹಿಗಳ ಕಾರ್ಖಾನೆಗೆ ಸೇರುತ್ತಿದ್ದಾರೆ. ಈ ಖಾಸಗೀ ಕಾರ್ಖಾನೆಯಲ್ಲಿ ಸೇರುವ ಈ ಸಮುದಾಯದ ಯುವಪೀಳಿಗೆಗೆ ಸಂಬಂಧಿಸಿದ ಉತ್ತಮ ಅನುಭವವಿದ್ದರೂ ನಂತರದಲ್ಲಿ ಮತ್ತಷ್ಟು ಅನುಭವವಾದರೂ ಅಲ್ಲಿಯ ಹುದ್ದೆಗಳಿಗೆ ಕಾನೂನ ರಕ್ಷಣೆ ಇರುವುದಿಲ್ಲ. ತಮ್ಮ ಗ್ರಾಮೀಣ ಬದುಕಿಗಿಂತ ಸಮಾನತೆ ಮತ್ತು ಸ್ವಾತಂತ್ರ್ಯದಲ್ಲಿ ಸ್ವಲ್ಪ

ಉತ್ತಮವೆಂದು ಯುವ ಪೀಳಿಗೆಯವರು ನಗರಕ್ಕೆ ಬರುತ್ತಿದ್ದಾರೆ. ನಗರಕ್ಕೆ ಬಂದವರು ಕೂಲಿಕಾರ್ಮಿಕರಾಗುತ್ತಾರೆ. ಹೀಗೆ ನಗರಕ್ಕೆ ಬಂದು ವಾಸಿಸುವ ಕಾರ್ಖಾನೆಗಳಿಗೆ ಸೇರುವ ಇವರಿಗೆ ಆರ್ಥಿಕ ವಹಿವಾಟಿಗೆ ತಕ್ಕಂತೆ ಬದುಕಬೇಕಾಗುತ್ತದೆ. ಇವರಿಗೆ ಉತ್ತಮ ಬಡಾವಣೆಗಳಲ್ಲಿ ಬದುಕಲು ಸಾಧ್ಯವಿಲ್ಲ. ಇವರಿಗೆ ವಾಸಿಸಲು ಸರಿಯಾದ ಸ್ಥಳಗಳು ಸಿಗದೆ ಕೊಳಚೆ ಪ್ರದೇಶಗಳಲ್ಲಿ ನೆಲಸಬೇಕಾಗುತ್ತದೆ. ನಿರ್ಲಕ್ಷಿತವಾಗಿರುವ ಪಟ್ಟಣಗಳ ಕೊಳಕು ನೀರು ಹರಿವ ಪ್ರದೇಶಗಳಿಗೆ ಸೇರುತ್ತಿದ್ದಂತೆ ಕೊಳಗೇರಿಯ ಎಲ್ಲ ಚಟುವಟಿಕೆಗಳಿಗೆ ಬಲಿಯಾಗುತ್ತಾರೆ. ತಾವು ದುಡಿಯುವ ಹಣವು ತಮ್ಮ ನಗರ ಪ್ರದೇಶದ ಆಧುನಿಕ ಬದುಕಿಗೆ ಸಾಕಾಗದೆ ಸುಲಭವಾಗಿ ಗಳಿಸಬಹುದಾದ ಕೆಲವು ವೃತ್ತಿಗಳಿಗೆ ಕೆಲವರು ತೊಡಗುವುದು ಉಂಟು. ಕಾರ್ಮಿಕರಿಗೆ ನಗರವನ್ನು ಸೇರುವ ಸಂದರ್ಭದಲ್ಲಿ ತನ್ನ ಹಿಂದೆ ಇದ್ದ ಊರ ರಕ್ತ ಸಂಬಂಧಿಗಳೊಂದಿಗಿನ ತಮ್ಮ ಜವಾಬ್ದಾರಿಯು ಅಷ್ಟಕ್ಕೇ ಉಳಿಯುತ್ತದೆ. ಗಳಿಕೆಯನ್ನು ಅವರ ಬದುಕಿಗೆ ಸರಿಹೊಂದಿಸಿಕೊಳ್ಳುವುದು ಕಷ್ಟಕರವಾಗಿರುತ್ತದೆ. ತಮ್ಮ ಹಳ್ಳಿಗಳಿಗೆ ವರ್ಷಕ್ಕೊಮ್ಮೆ ಹೋಗಿಬರುವುದೂ ಕಷ್ಟಕವಾಗಿರುತ್ತದೆ. ಕಾನೂನಿನ್ವಯ ದಾಖಲೆಗಳಿಲ್ಲದೆ ಇವರು ಕಾರ್ಖಾನೆಗಳಲ್ಲಿ ಕೂಲಿಕಾರ್ಮಿಕರಾಗಿ ದುಡಿಯುವುದು ಅನಿವಾರ್ಯವಾಗುತ್ತದೆ. ಬಂಡವಾಳ ಹೂಡಿದ ಕಾರ್ಖಾನೆಯ ಮಾಲಿಕರಿಗೆ ಇಂಥ ಅತಂತ್ರ ಸ್ಥಿತಿಯನ್ನು ಹೊಂದಿರುವವರು ಬೇಕಾಗಿರುತ್ತದೆ. ಅವರಿಗೆ ಯುವಪೀಳಿಗೆಯವರು ಬಲಿಯಾಗುತ್ತಾರೆ.

## ಅ. ಬದಲಾಗುತ್ತಿರುವ ಜಾಗತಿಕ ವಿದ್ಯಮಾನಗಳು

ಇಂದಿನ ಜಗತ್ತು ಪ್ರತಿ ತಾಸಿಗೊಮ್ಮೆ ಹೊಸ ಹೊಸ ಮಾರ್ಗಗಳನ್ನು ಶೋಧಿಸುವ ಮೂಲಕ ಮತ್ತು ಹೊಸ ಹೊಸ ವಿಚಾರಗಳನ್ನು ಕಂಡುಕೊಳ್ಳುವ ಮೂಲಕ ಇಂದಿನ ಜಗತ್ತು ಗಾತ್ರದಲ್ಲಿ ಕಿರಿದಾಗಿದೆ. ಬದಲಾಗುತ್ತಿರುವ ಜಾಗತಿಕ ವಿದ್ಯಮಾನಗಳು ಮಾನವರನ್ನು ಹೊಸ ದಿಕ್ಕಿನೆಡೆಗೆ ಕೊಂಡೊಯ್ಯುತ್ತಿವೆ. ವೈಜ್ಞಾನಿಕ ವಿಚಾರವು ಹಳೆಯ ಸಾಮಾಜಿಕ ಕಟ್ಟಳೆಗಳನ್ನು ತೊಡೆದು ಹಾಕುತ್ತಿದೆ. ಮತ್ತು ಪ್ರಗತಿಪರ ವಿಚಾರದತ್ತ ಮನುಷ್ಯನನ್ನು ನುಗ್ಗಿಸುತ್ತಿದೆ. ಜಾಗತಿಕ ವಿದ್ಯಮಾನಗಳ ಅರಿವಿನಿಂದಾಗಿ, ಅಭಿವೃದ್ಧಿ ಹೊಂದುತ್ತಿರುವ ದೇಶಗಳು ತಮ್ಮ ಆರ್ಥಿಕ ದಿಕ್ಕನ್ನೇ ಬದಲಿಸಿಕೊಂಡಿವ.

ವಸಾಹತುಶಾಹಿಗಿಂತ ಮುಂಚಿತವಾಗಿ ಇದ್ದಂತಹ ಪರಿಸ್ಥಿತಿಯೆಂದರೆ, ಮುಂದುವರೆದ ದೇಶಗಳು ಉತ್ಪಾದಿಸಿದ ಅಧಿಕ ಉತ್ಪನ್ನವು ಆ ದೇಶದೊಳಗಡೆ ಮಾತ್ರ ಅನುಭೋಗವಾಗುತ್ತಿತ್ತು. ಅನುಭೋಗವಾಗಿ ಮಿಕ್ಕ ಉತ್ಪನ್ನವು ಬಹುದಿನಗಳ ನಂತರ, ಅದನ್ನು ವ್ಯರ್ಥವಾಗಿ ಬೀಸಾಡುತ್ತಿದ್ದರು. ಬದಲಾದ ಜಾಗತಿಕ ಸಂದರ್ಭದಲ್ಲಿ ಹೊಸ ಹೊಸ ದೇಶಗಳನ್ನು ಶೋಧಿಸುವ ಮೂಲಕ, ಮತ್ತು ಆ ದೇಶದಿಂದ ಮತ್ತೊಂದು ದೇಶಕ್ಕೆ ಸಂಪರ್ಕದ ಮಾರ್ಗ ಸುಲಭವಾಯಿತು. ಇದರಿಂದಾಗಿ ಅಧಿಕ ಉತ್ಪಾದನೆಯನ್ನು ಮಾಡುವ ಅಥವಾ ಉತ್ಪಾದನಾ ಕೊರತೆ ಇರುವ ದೇಶಗಳಿಗೆ, ಹೆಚ್ಚುವರಿ ಉತ್ಪನ್ನವನ್ನು ಮಾರಾಟ ಮಾಡುವುದು

ಒಂದು ವ್ಯಾಪಾರವಾಗಿಯೇ ಅಂದು ಹುಟ್ಟಿಕೊಂಡಿತು. ಮುಂದುವರೆದ ದೇಶಗಳು ತಮ್ಮ ತಮ್ಮಲ್ಲಿಯೇ ವ್ಯಾಪಾರದ ಪೈಪೋಟಿಯಿಂದಾಗಿ, ಹಿಂದುಳಿದ ರಾಷ್ಟ್ರಗಳಲ್ಲಿ ಮುಂದುವರೆದ ರಾಷ್ಟ್ರಗಳು ವಸಾಹತುಗಳನ್ನು ಸ್ಥಾಪಿಸಿದವು. ಈ ವ್ಯಾಪಾರದ ವಸಾಹತುಗಳೇ ಮುಂದೆ, ಹಿಂದುಳಿದ ರಾಷ್ಟ್ರಗಳ ಆರ್ಥಿಕ ಹಿಡಿತವನ್ನು ತಮ್ಮ ಹಿಡಿತಕ್ಕೆ ತೆಗೆದುಕೊಂಡವು.

ಗ್ಯಾಟ್ ಸಾಮಾನ್ಯ ಒಪ್ಪಂದ, ವ್ಯಾಪಾರ ಸುಂಕ ವಿಧಿಸುವಿಕೆಯನ್ನು ಜಾರಿಗೆ ತಂದವು. ಗ್ಯಾಟಿನ ಪ್ರಮುಖ ಉದ್ದೇಶಗಳು ಹೀಗಿವೆ. ಮುಂದುವರೆದ ರಾಷ್ಟ್ರಗಳು ಇತರೆ ಹಿಂದುಳಿದ ರಾಷ್ಟ್ರಗಳೊಡನೆ ವ್ಯಾಪಾರ ಒಪ್ಪಂದ ಮಾಡಿಕೊಳ್ಳುವಾಗ ಗ್ಯಾಟಿನ ನಿಯಮಗಳು ಉಲ್ಲಂಘಿಸುವಂತಿರಲಿಲ್ಲ. ಮತ್ತು ವ್ಯಾಪಾರನಿರತ ರಾಷ್ಟ್ರಗಳು ಸುಂಕ ತೆತ್ತಲೇ ಬೇಕಾಯಿತು. ಈ ಸುಂಕ ನಿಧಿಸುವಿಕೆಯಿಂದಾಗಿ ಬಡರಾಷ್ಟ್ರಗಳಿಗೆ ಆ ಸಂಕದ ಹೊರೆಯನ್ನು ಮುಂದುವರಿದ ರಾಷ್ಟ್ರಗಳು ಹೋರಿಸುತ್ತಿವೆ.

ಹೀಗೆಯೇ ಯೂರೋಪ ಒಕ್ಕೂಟ ರಚನೆಯಾಯಿತು. ತದನಂತರ I.M.F ಜಾರಿಗೆ ತಂದಿತು. ಇಂದು I.M.F. ಗಿಂತಲೂ ವಿಶ್ವಬ್ಯಾಂಕು ಪ್ರಪಂಚದಾದ್ಯಂತ ತುಂಬಾ ಕೆಲಸ ಮಾಡುತ್ತಿದೆ. ವಿಶ್ವಬ್ಯಾಂಕು ಹುಟ್ಟು ಹಾಕಿದ W.T.O ಹಿಂದುಳಿದ ಮತ್ತು ಮುಂದುವರೆಯುತ್ತಿರುವ ರಾಷ್ಟ್ರಗಳಿಗೆ ತುಂಬಾ ಅಪಾಯಕಾರಿಯಾಗಿ ಕೆಲಸ ಮಾಡುತ್ತಿದೆ. ಮುಖ್ಯವಾಗಿ ವಿಶ್ವಬ್ಯಾಂಕಿನ ಪ್ರಮುಖ ಕೆಲಸವೆಂದರೆ ಹಿಂದುಳಿದ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ ಆರ್ಥಿಕ ಹಿಡಿತವನ್ನು ಸಾಧಿಸುವುದೇ ಆಗಿರುತ್ತದೆ. ಹೀಗಾಗಿಯೇ ಭಾರತದಂತಹ ರಾಷ್ಟ್ರಗಳು W.T.Oಗೆ ಸುಲಭವಾಗಿ ಮಣಿದು ಒಪ್ಪಂದಕ್ಕೆ ಸಹಿ ಹಾಕಲೇಬೇಕಾಯಿತು. ಇದರಿಂದಾಗಿ ಕೃಷಿ ಉತ್ಪನ್ನಗಳಿಗೆ ಮತ್ತು ದೇಶೀಯ ಕೈಗಾರಿಕೆಗಳ ಉತ್ಪನ್ನಗಳಿಗೆ ಮಾರುಕಟ್ಟೆಯೇ ಇಲ್ಲದಂತಾಗಿ ಇದರಿಂದ ಕೃಷಿಕರು ತಾವು ಬೆಳೆದ ಉತ್ಪನ್ನವನ್ನು ರಸ್ತೆಗೆ ಎಸೆದು, ಆತ್ಮಹತ್ಯೆಗಳನ್ನು ಮಾಡಿಕೊಳ್ಳುತ್ತಿದ್ದಾರೆ. ರೈತರ ಗತಿಯೇ ಹೀಗಾದಾಗ ಕೃಷಿಕಾರ್ಮಿಕರ ಗೋಳು ಮುಗಿಲುಮುಟ್ಟಿದೆ. ದೇಶೀಯ ಅನೇಕ ಕೈಗಾರಿಕೆಗಳ ಮಾಲಿಕರು ಕಾರ್ಖಾನೆಗಳಿಗೆ ಬೀಗ ಜಡಿದರು. ಇದರಿಂದಾಗಿ ಸಾವಿರಾರು ಕಾರ್ಮಿಕ ಬೀದಿ ಪಾಲಾದರು, ಇಂತಹ ಕ್ಲಿಷ್ಟ ಪರಿಸ್ಥಿತಿಯನ್ನು ಕಂಡು ಕಾಣದಂತೆ ಸರಕಾರವು ಮೂಕಾಗಿ ಕುಳಿತಿದೆ. ಜಾಗತೀಕರಣಕ್ಕೆ ತುತ್ತಾದ ಅನೇಕ ರಾಷ್ಟ್ರಗಳು ಇಂದು ದಿವಾಳಿಯಾಗಿವೆ. ಜಾಗತೀಕರಣದ ಪ್ರಭಾವಕ್ಕೆ ಸಿಲುಕಿರುವ ದೇಶಗಳಲ್ಲಿನ ಕೆಳವರ್ಗ ಮತ್ತು ಮಧ್ಯಮ ವರ್ಗಗಳು ಆರ್ಥಿಕವಾಗಿ ವಿಚಲಿತವಾಗಿವೆ. ಹೀಗಾಗಿ ಈ ಜಾಗತೀಕರಣವು ನಮ್ಮ ದೇಶದಲ್ಲಿ ಕಾಲಿಟ್ಟಂದಿ ನಿಂದ ಅನೇಕ ಅಲೆಮಾರಿಗಳು ಅರೆ ಅಲೆಮಾರಿಗಳು, ಬುಡಕಟ್ಟು ಸಮುದಾಯಗಳು ಮತ್ತು ಕೆಳಜಾತಿಗಳ ಬದುಕು ಸರ್ವನಾಶವಾಗುತ್ತಲೇ ಬಂದಿವೆ. ಇಂದಿನ ಜಾಗತಿಕ ವಿದ್ಯಾಮಾನಗಳು, ಬಡವರಿಗೆ, ಕಂಠಕಪ್ರಾಯ ವಾಗಿವೆ. ಮೇಲಿನ ಎಲ್ಲಾ ಕಾರಣಗಳಿಂದಾಗಿಯೇ ಭಾರತವನ್ನು ಪ್ರಪಂಚದ ಇತರ ದೇಶಗಳೊಂದಿಗೆ

ಹೋಲಿಸಿದರೆ, ಬಡತನ ರೇಖೆಗಿಂತ ಕೆಳಗೆ ಶೇ. ೩೮ ರಷ್ಟು ಜನ ವಾಸ ಮಾಡುತ್ತಿರುವುದು. ಅದು ಭಾರತದಲ್ಲಿಯೊಂದೇ ಆಗಿದೆ. ಅಲ್ಲದೆ, ಇತರ ದೇಶಗಳಿಗಿಂತ ನಮ್ಮ ದೇಶದಲ್ಲಿ ಭಿಕ್ಷುಕರ ಸಂಖ್ಯೆ ಕೂಡ ಹೆಚ್ಚಾಗಿದೆ.

ಜಾಗತೀಕರಣದಿಂದಾಗಿ ಡೊಂಬರಂತಹ ಅನೇಕ ಸಮುದಾಯಗಳಿಗೆ, ಕೆಲಸ ಮಾಡುವ ಕೈಗಳಿಗೆ ಕೆಲಸವಿಲ್ಲದೆ ನಿರುದ್ಯೋಗಿಗಳಾಗಿ ದಿಕ್ಕು ಕಾಣದಾಗಿದ್ದಾರೆ. ಇಂತಹ ಸಮುದಾಯಗಳು ಪ್ರತಿದಿನ ಒಂದೊಪ್ಪತ್ತಿನ ಊಟಕ್ಕೂ ಸಹ ತುಂಬಾ ತೊಂದರೆ ಪಡಬೇಕಾಗಿದೆ. ಇದಕ್ಕೆಲ್ಲಾ ಕಾರಣ ಸರ್ಕಾರವು ಜಾಗತೀಕ ವಿದ್ಯಮಾನಗಳ ಸುಳಿಗೆ ಸಿಲುಕಿ, ದೇಶೀಯ ಕರಕುಶಲ ಕಲೆ ಮತ್ತು ದೇಶೀ ಉತ್ಪಾದನೆಯ ಇಳಿಮುಖವಾಗಲು ಕಾರಣವಾಯಿತು.[1]

ಸರಕಾರವು ರೂಪಿಸುತ್ತಿರುವ ಅಭಿವೃದ್ಧಿ ನೀತಿಯಲ್ಲಿ ದೋಷವಿರುವುದರಿಂದ, ಇಂದು ಶ್ರೀಮಂತರು ಇನ್ನೂ ಶ್ರೀಮಂತರಾಗುತ್ತಿದ್ದಾರೆ. ಬಡವರು ಇನ್ನೂ ಬಡವರಾಗುತ್ತಿದ್ದಾರೆ. ಇಂದಿನ ಸರ್ಕಾರಗಳು ತಿಳಿದು ಕೊಂಡಿರುವುದು ಅಭಿವೃದ್ಧಿಯೆಂದರೆ ಬೆಂಗಳೂರಿನಂತಹ ಪ್ರದೇಶದಲ್ಲಿ ಇನ್‌ಪೋಸಿಸ್‌ನಂತಹ ಕಂಪನಿ ಸ್ಥಾಪನೆಯೇ ಸಾಕು ಇಡೀ ದೇಶವೇ ಅಭಿವೃದ್ಧಿಯಾಗುತ್ತದೆ ಎಂದು ತಿಳಿದುಕೊಳ್ಳುತ್ತವೆ.

ಅರ್ಥಶಾಸ್ತ್ರಜ್ಞರ ಪ್ರಕಾರ, ದೇಶದಲ್ಲಿನ ಒಟ್ಟು ರಾಷ್ಟ್ರೀಯ ಉತ್ಪನ್ನ ಆದೇಶದ ಒಟ್ಟು ಪ್ರಜೆಗಳ ಮಧ್ಯೆ ಸಮಾನವಾಗಿ ಹಂಚಿಕೆಯಾದಾಗ ಮಾತ್ರ ಅದು ಅಭಿವೃದ್ಧಿಯ ನಿಜವಾದ ರಾಷ್ಟ್ರವೆಂದಿದ್ದಾರೆ. ರಾಷ್ಟ್ರದಲ್ಲಿನ ಉದ್ಯೋಗಗಳು ಮತ್ತು ಅನುಭೋಗದಮಟ್ಟವು ಸಮವಾಗಿ ಹಂಚಿಕೆಯಾಗಿರಬೇಕು. ಹೀಗಿದ್ದಾಗ ಮಾತ್ರ ಆ ರಾಷ್ಟ್ರದ ಜನತೆ, ಸಮೃದ್ಧವಾಗಿದ್ದಾರೆಂದು ತಿಳಿದುಕೊಳ್ಳಬಹುದು.

ಹೀಗೆ, ಜಾಗತೀಕ ವಿದ್ಯಮಾನಗಳು ಮೂರನೇ ಜಗತ್ತಿನ ದೇಶಗಳ ಮಾನವ ಮತ್ತು ನೈಸರ್ಗಿಕ ಸಂಪನ್ಮೂಲಗಳನ್ನು ನುಂಗಿಹಾಕುತ್ತಿವೆ. ದೇಶದ ಬಹುತ್ವ ಮತ್ತು ಆಂತರಿಕ ಕಾನೂನುಗಳು ಮೆಲ್ಲಗೆ ಕಣ್ಮರೆಯಾಗಿ ಗುರಿಮುಟ್ಟ ವಿಫಲವಾಗಿವೆ. ಇದರಿಂದಾಗಿ ಏಕರೂಪದ ಅಸಮಾನ ವ್ಯವಸ್ಥೆಯು ಇಲ್ಲಿ ರೂಪಗೊಳ್ಳುತ್ತಿದೆ. ಜಾಗತೀಕರಣ ಸೃಷ್ಟಿಸುತ್ತಿರುವ ಉಪಭೋಗ ಸಂಸ್ಕೃತಿಯು ಇಲ್ಲಿನ ಶ್ರಮಿಕ ವರ್ಗವನ್ನು ಅತಂತ್ರ ಸ್ಥಿತಿಯಲ್ಲಿಡುತ್ತಿದೆ. ಇದು ಕೇವಲ ಮಾರುಕಟ್ಟೆಯ ಪ್ರಪಂಚ ಮಾತ್ರವಾಗಿ, ದುರ್ಬಲ ಸಮುದಾಯಗಳು ಅತಂತ್ರ ಸ್ಥಿತಿಗೆ ದೂಡಲ್ಪಡುತ್ತಿವೆ.

### ಆ. ಮೂರನೇ ಜಗತ್ತಿನ ದೇಶಗಳ ಸಾಮಾಜಿಕ ಆರ್ಥಿಕ ಸಂದರ್ಭಗಳು

ಇಪ್ಪತ್ತನೆ ಶತಮಾನದ ಕೊನೆಯ ಹಂತದ ಆಧುನಿಕತ್ತೋರ ಪ್ರಕ್ರಿಯೆಗಳನ್ನು ಜಾಗತಿಕವಾಗಿ ಗಮನಿಸಿದರೆ, ಯುರೋಪಿನಲ್ಲಿ ಹಿಂದೆ ಉಂಟಾದ ಕೈಗಾರಿಕಾಕ್ರಾಂತಿ ಮತ್ತು ಪುನರುಜ್ಜೀವನದ ಸ್ಥಿತ್ಯಂತರಗಳು

ಜಗತ್ತಿಗೆ ಹೊಸ ಬಗೆಯ ಸಂವೇದನೆಯನ್ನು, ಉತ್ಪನ್ನವನ್ನು ರೂಢಿಸಿಕೊಟ್ಟವು. ಅವುಗಳ ಹಿಂ ಮಹಾಯುದ್ಧಗಳನ್ನು ಬಿತ್ತಿದವು. ಹಾಗೆಯೇ ಯುದ್ಧ ಅಹಾರ ಮಾನವ ಸಂಪತ್ತಿನ ನಷ್ಟದ ಜೊತೆಗೆ ಅನೇಕ ಬಗೆಯ ಹೋರಾಟಗಳು ಹುಟ್ಟಿಕೊಂಡವು. ಎಷ್ಟೋ ರಾಷ್ಟ್ರಗಳು ಸ್ವಾತಂತ್ರ್ಯಗೊಂಡವು. ಅದರಂತೆಯೇ ಅವರಿಗೆ ಭಿನ್ನ ದಾರಿಯಲ್ಲಿ ಆಯಾಯ ರಾಷ್ಟ್ರೀಯ ಪ್ರಭುತ್ವಗಳ ಜಾಲದಲ್ಲಿ ತೇಲಿ ಹೋಗುತ್ತಿದ್ದ ಅಪ್ರತಿಷ್ಠ ಸಮುದಾಯಗಳು ಪ್ರತ್ಯೇಕ ಗುರುತನ್ನು ಮತ್ತು ಅಭಿವೃದ್ಧಿಯನ್ನು ಬಯಸಿದವು. ಜಗತ್ತಿನ ಉದ್ದಕ್ಕೂ ಇದು ಸಮಸ್ಯೆಯಾಗಿ ಪರಿಣಿಮಿಸಿತು. ಹೀಗಾಗಿಯೇ ತೃತೀಯ ಜಗತ್ತು ಹುಟ್ಟಿ ಕೊಂಡದ್ದು. ಈ ತೃತೀಯ ಜಗತ್ತಿನ ಆಂತರಿಕ ಒತ್ತಡ, ಸವಾಲುಗಳು ಅಭಿವೃದ್ಧಿಯಪಥ ಹಾಗೂ ಆಧುನಿಕೋತ್ತರ ಸಂಕರಗಳು ಸೂಕ್ಷ್ಮವಾದ ಸಾಂಸ್ಕೃತಿಕ ಪುನರ್‌ಜ್ಜೀವನವನ್ನು ಬಯಸಿದವು. ಎರಡು ಮಹಾಯುದ್ಧಗಳ ನಂತರ ಉಂಟಾಗಿದ್ದ ಶೀತಲಯುದ್ಧ ಈಗ ಮುಗಿದಿದ್ದು ಇನ್ನೊಂದು ಬಗೆಯ ಶೀತಲಯುದ್ಧಗಳು ಎಲ್ಲೆಡೆ ಹುಟ್ಟಿಕೊಂಡಿವೆ. ಈ ಯುದ್ಧಗಳನ್ನು ಜಾಗತೀಕರಣ ಪ್ರಕ್ರಿಯೆಯ ಭಾಗವಾಗಿಯೇ ನಾವು ಅರ್ಥಮಾಡಿಕೊಳ್ಳಬೇಕಿದೆ.

"ಹಿಂದುಳಿದಿದ್ದು ಈಗ ಮುಂದುವರಿಯುತ್ತಿರುವ ದೇಶಗಳಾಗಿರುವ ದಕ್ಷಿಣ ಏಷ್ಯಾದ ದೇಶಗಳಾಗಲಿ, ಆಫ್ರಿಕಾ ಖಂಡದ ರಾಷ್ಟ್ರಗಳಾಗಲಿ ದಕ್ಷಿಣ ಅಮೇರಿಕಾದ ದೇಶಗಳಾಗಲಿ ತಮ್ಮ ತಮ್ಮ ಪ್ರಭುತ್ವ ಮತ್ತು ರಾಜಕೀಯ ಒಕ್ಕೂಟಗಳಿಂದ ವಿಶೇಷವಾಗಿ ಆಕ್ರಮಣಶೀಲ ರಾಷ್ಟ್ರಗಳ ವಶವಾಗುತ್ತಿವೆ. ಆ ಕಡೆ ರಷ್ಯಾ ಮತ್ತೆ ತನ್ನ ಕಿರೀಟವನ್ನು ಉಳಿಸಿಕೊಳ್ಳಲು ಹೋರಾಡುತ್ತಿದ್ದರೆ, ಅಮೇರಿಕಾವು ಹೇಗಾದರೂ ಮಾಡಿ ತೃತೀಯ ಜಗತ್ತಿನ ನಾಯಕನಾಗೇ ಉಳಿಯಲು ಯತ್ನಿಸುತ್ತಿದೆ. ಮಿತ್ರ ರಾಷ್ಟ್ರಗಳ ಒಕ್ಕೂಟವೀಗ ಎಂಟು ರಾಷ್ಟ್ರಗಳ ವೇಷ ಧರಿಸಿದೆ. ಈ ಎಂಟು ಬಲಿಷ್ಠ ರಾಷ್ಟ್ರಗಳು ಉಳಿದೆಲ್ಲ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಅದರಲ್ಲೂ, ದಕ್ಷಿಣ ಏಷ್ಯಾದ ಬಗ್ಗೆ ವಿಶೇಷ ಕಾಳಜಿ ತೋರುವ ಮೂಲಕ ತಮ್ಮ ಮಿಲಿಟರಿ ಯಜಮಾನ್ಯವನ್ನು ಎಚ್ಚರಿಕೆಯಿಂದ ಕಾಯ್ದುಕೊಳ್ಳುತ್ತಿವೆ. ಅದರ ಆಳದಲ್ಲೇ ಚೀನಾ, ಜಪಾನ್, ಭಾರತ, ಪಾಕಿಸ್ತಾನದಂತಹ ದೇಶಗಳೀಗ ಅಣ್ವಸ್ತ್ರ ದೇಶಗಳಾಗಿ ಮಾರ್ಪಟ್ಟಿವೆ. ಈ ನಾಲ್ಕು ದೇಶಗಳ ಜೊತೆಗೆ ಇರಾನ್, ಇರಾಕ್, ಕೊರಿಯಾಗಳು ಸೇರಿಕೊಂಡು ಬಿಟ್ಟರೆ, ಆಗ ಜಗತ್ತಿನ ಯಾವೊಂದು ದೈತ್ಯ ಶಕ್ತಿಯೂ ಈ ದೇಶಗಳನ್ನು ನಿಯಂತ್ರಿಸಲಾರವು."[೩]

ಇದು ಪರೋಕ್ಷವಾಗಿ ಜಾಗತಿಕ ಪುನರುಜ್ಜೀವನವನ್ನು ಸೂಚಿಸುತ್ತಿದೆ. ಪ್ರಭುತ್ವದ ಶಕ್ತಿಗೂ ಅಂತರಾಷ್ಟ್ರೀಯ ಒಪ್ಪಂದಗಳ ನೀತಿಗೂ ಅಲ್ಲಿನ ಸಾಮಾಜಿಕ ಸಾಂಸ್ಕೃತಿಕ ಆರ್ಥಿಕ ಕ್ಷೇತ್ರಗಳಿಗೂ ಒಳಸಂಬಂಧಗಳು ಏರ್ಪಟ್ಟು ಈಗ ಒಟ್ಟು ತೃತೀಯ ಜಗತ್ತಿನ ಸಾಮಾಜಿಕ ರೂಪಗಳು ವೇಗವಾಗಿ ವಿಕಾಸವಾಗುತ್ತಿವೆ. ಈ ಬಗೆಯ ಪುರನುಜ್ಜೀವನವನ್ನು ಆಯಾ ದೇಶದ ಮಿಲಿಟರಿ ಶಕ್ತಿ ರಾಜಕೀಯ

ಪ್ರಭುತ್ವ ಆರ್ಥಿಕ ಬೆಳವಣಿಗೆಗೆ, ವೈಜ್ಞಾನಿಕ ಆವಿಷ್ಕಾರ ಮತ್ತು ಸಾಮಾಜಿಕ ಎಚ್ಚರಗಳ ಮೂಲಕ ವಿಶ್ಲೇಷಿಸಬಹುದು. ಮಹಾಯುದ್ಧಗಳು ಮುಗಿದ ಈ ಅರ್ಧ ಶತಮಾನದಲ್ಲಿ ಜಗತ್ತು ಅನೇಕ ಬಗೆಯ ಅಂತಾರಾಷ್ಟ್ರೀಯ ಒಪ್ಪಂದಗಳನ್ನು ಮಾಡಿಕೊಂಡಿದ್ದರೂ, ತೃತೀಯ ಜಗತ್ತು ತಣ್ಣಗಿಲ್ಲ. ವಿಶ್ವದ ರಾಜಕೀಯ ಪ್ರಭುತ್ವದ ಪೈಪೋಟಿಯೂ ಇದಕ್ಕೆ ಕಾರಣವಿರಬಹುದು. ಅಭಿವೃದ್ಧಿಶೀಲ ರಾಷ್ಟ್ರಗಳ ಆತ್ಮವಿಶ್ವಾಸವೂ ಈಗ ಹೆಚ್ಚಿದೆ. ಬಲಿಷ್ಠ ರಾಷ್ಟ್ರಗಳ ಅಂತರಾಷ್ಟ್ರೀಯ ರಾಜಕೀಯ ಯಜಮಾನ್ಯವನ್ನು ತೃತೀಯ ಜಗತ್ತು ಸಾಕಷ್ಟು ಅನುಭವಿಸಿದೆ.

ಇವುಗಳ ಜೊತೆಗೆ ತೃತೀಯ ಜಗತ್ತು ತನ್ನ ಕಾಲ ಮೇಲೆ ತಾನೇ ನಿಲ್ಲಬಲ್ಲ ಶಕ್ತಿಯನ್ನು ಗಳಿಸಿ ಕೊಳ್ಳುತ್ತಿದೆ. "ಈ ಬಗೆಯ ಎಚ್ಚರವನ್ನು ತೃತೀಯ ಜಗತ್ತಿನ ಪ್ರಭುತ್ವದ ಪುನರ್‌ಜೀವನ ಎಂದು ಕರೆಯಬಹುದು. ಇಲ್ಲಿ ಮುಖ್ಯವಾದ ಪುನರ್‌ಜೀವನವನ್ನು ನಾವು ರಾಜಕೀಯ ಆರ್ಥಿಕ ಸಾಂಸ್ಕೃತಿಕ ಹಾಗೂ ವೈಜ್ಞಾನಿಕ ಪರಿಭಾಷೆಗಳಲ್ಲಿ ಗಮನಿಸಬಹುದು. ಹಾಗೆಯೇ ಈ ವಿವಿಧ ಹಂತಗಳ ರೂಪಗಳ ಪುರನುಜ್ಜೀವನಕ್ಕೆ ದೇಶೀಕರಣ ಮತ್ತು ಜಾಗತೀಕರಣಗಳ ಚೌಕಟ್ಟಿನಲ್ಲಿಟ್ಟು ವಿಶ್ಲೇಷಿಸಬೇಕು."[೪]

## ೩. ಅಲೆಮಾರಿಗಳ ಬದಲಾಗುತ್ತಿರುವ ಬದುಕು

"ಸುದೀರ್ಘ ಕಾಲದ ಅಲೆಮಾರಿತನ ಡೊಂಬರ ವೃದಂದ ಸಂಕೀರ್ಣ ಸ್ವರೂಪಕ್ಕೆ ಕಾರಣವಾಗಿರುವುದ ರಿಂದ ಡೊಂಬರು ಯಾವುದೇ ಪ್ರದೇಶ ಸಂದರ್ಭ ಜನಸಮುದಾಯಗಳ ಜೊತೆ ಸಹಜವಾಗಿಯೇ ಬೆರೆತು ಹೋಗುವ ಗುಣಸ್ವಭಾವ ಹೊಂದಿದ್ದಾರೆ. ಇದೇ ಕಾರಣದಿಂದಾಗಿ ಅವರು ವಿವಿಧ ಭಾಷೆಗಳನ್ನು ಬಲ್ಲವ ರಾಗಿದ್ದಾರೆ."[೫]

ಅಲೆಮಾರಿಯಾದ ಈ ಸಮುದಾಯದಲ್ಲಿ ಡೊಂಬರಲ್ಲದವರೂ ಸೇರಿ ತಾವು ಡೊಂಬರ ಕಾಲದಲ್ಲಿ ಸೇರಿ ಒಂದಾಗುವ ಒಂದು ವಿಶಿಷ್ಟ ಸಂಗತಿ ಗಮನಾರ್ಹವಾಗಿ ಕಾಣುತ್ತದೆ. ಊರೂರಿಗೆ ಅಲೆಯುವಾಗ ಅಲ್ಲಲ್ಲಿಯ ಕೆಲ ನಿರ್ಗತಿಕ ಯುವಕ ಯುವತಿ ಮಕ್ಕಳು ಇಂತವರು ಡೊಂಬರ ಪಂಗಡದವರ ಜೊತೆ ಸೇರಿಕೊಳ್ಳುತ್ತಿದ್ದರು. ಆದರೆ ಬದಲಾಗುತ್ತಿರುವ ಅಲೆಮಾರಿಗಳ ಬದುಕಿನಲ್ಲಿ ಇಂದು ಅದಾವುದು ಇಲ್ಲವಾಗಿದೆ.

"ಸಮಾಜ ಎನ್ನುವುದು ನಿರಂತರ ಪರಿವರ್ತನೆಗೆ ಒಳಗಾಗುತ್ತಲೇ ಇರುತ್ತದೆ. ಬದಲಾಗುತ್ತ ಹೋಗುವುದು ಒಂದು ನೈಸರ್ಗಿಕ ಕ್ರಿಯೆ ಕೂಡ ಇದರಿಂದಾಗಿಯೆ ಸಮಾಜ ಚಲನಶೀಲವಾಗುತ್ತದೆ. ಜನ ಸಮುದಾಯ ಕಾಲದಿಂದ ಕಾಲಕ್ಕೆ ಜೀವನದ ವೇಗ ಗತಿಗಳನ್ನು ಅಳವಡಿಸಿಕೊಳ್ಳುತ್ತಾ ಕ್ರಿಯಾಶೀಲವಾಗುತ್ತದೆ. ಇದು ಪ್ರಪಂಚದ ಯಾವುದೇ ಜನಸಮುದಾಯಕ್ಕೂ ಅನ್ವಯಗೊಳ್ಳುವಂಥದು."[೬]

ಡೊಂಬರು ಮೂಲತಃ ಅಲೆಮಾರಿಗಳಾಗಿದ್ದ ಸಂದರ್ಭದಲ್ಲಿ ಶಿಕ್ಷಣದಿಂದ ದೂರ ನಿಂತುಕೊಂಡಿದ್ದರು. ಆ ಸಂದರ್ಭದಲ್ಲಿ ಅಲೆಮಾರಿತನವೇ ಅವರ ಪ್ರಮುಖ ಬದುಕಾಗಿತ್ತು. ಹೀಗಿದ್ದರಿಂದ ಒಂದೇ ಕಡೆ ನೆಲೆನಿಂತು ಶಿಕ್ಷಣ ಪಡೆಯುವುದು ಅಸಾಧ್ಯದ ಮಾತಾಗಿತ್ತು. ಅಂದು ಸಮುದಾಯದಲ್ಲಿ ಶಿಕ್ಷಣ ಪಡೆದವರು ಯಾರಾದರೂ ಇದ್ದಾರೆಯೇ ಎಂದು ಕಲ್ಪಿಸಿಕೊಳ್ಳುವುದೂ ಅಸಾಧ್ಯವಾಗಿತ್ತು. ಬದಲಾಗುತ್ತಿರುವ ಸಂದರ್ಭದಲ್ಲಿ ಡೊಂಬರು ತಮ್ಮ ಮೂಲ ವೃತ್ತಿಯನ್ನು ಸಂಪೂರ್ಣವಾಗಿ ಮರೆಮಾಚಿದ್ದರಿಂದಾಗಿ ಒಂದೇ ಕಡೆ ನೆಲೆನಿಂತು ಜೀವನ ಮಾಡಲು ಇವರಿಗೆ ಸಾಧ್ಯವಾಯಿತು. ಇದರಿಂದಾಗಿ ಹತ್ತು ಹಲವಾರು ಕಸುಬುಗಳನ್ನು ಕೈಗೊಂಡಿದ್ದಾರೆ. ತಾವು ವಾಸ ಮಾಡುತ್ತಿರುವ ಪ್ರದೇಶಗಳಲ್ಲಿ ತಮ್ಮ ತಮ್ಮ ಅಕ್ಕಪಕ್ಕದ ಸಮುದಾಯಗಳ ಸ್ಥಿತಿಗತಿಯನ್ನು ಸೂಕ್ಷ್ಮವಾಗಿ ಗ್ರಹಿಸುವಂತಾಗಿದ್ದಾರೆ. ಇದರಿಂದಾಗಿಯೇ ಡೊಂಬರು ತಮ್ಮ ಜೀವನದ ಶೈಲಿಯನ್ನೇ ಬದಲಾಯಿಸಿಕೊಂಡರು. ಹೀಗೆ ಒಂದೇ ಕಡೆ ನೆಲೆನಿಂತು ತಮ್ಮ ಬದುಕನ್ನು ಸ್ವಲ್ಪಮಟ್ಟಿಗೆ ಸುಧಾರಿಸಿಕೊಂಡಿದ್ದರಿಂದಾಗಿ ಇಂದು ಡೊಂಬರ ಸಮುದಾಯದಲ್ಲಿ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಈ ಸಮುದಾಯದವರಲ್ಲಿ ಈಗ ಒಟ್ಟು ಸಾಕ್ಷರರ ಸಂಖ್ಯೆ ಶೇ. ೫೫ರಷ್ಟು ಇದೆ. ಇನ್ನುಳಿದ ಶೇ. ೪೫ರಷ್ಟು ಜನರು ಅನಕ್ಷರಸ್ಥರಾಗಿಯೇ ಉಳಿದುಕೊಂಡಿದ್ದಾರೆ. ಇದಕ್ಕೆ ಸರ್ಕಾರ ಮತ್ತು ಸಮುದಾಯ ಕೂಡ ಸರ್ವ ಪ್ರಯತ್ನ ಮೂಡುತ್ತಲೇ ಸಾಗಿವೆ. ನೂರಕ್ಕೆ ನೂರರಷ್ಟು ಶಿಕ್ಷಣ ಕೊಡಿಸುವ ದಿಕ್ಕಿನಲ್ಲಿ ದಿಟ್ಟ ಹೆಜ್ಜೆಯನ್ನು ಕೂಡ ಇಂದು ಸರ್ಕಾರ ಮತ್ತು ಸಮುದಾಯದ ಮುಖಂಡರು ಇಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಹಲವಾರು ಸೌಲಭ್ಯ ಗಳನ್ನು ಕೂಡ ಕಲ್ಪಿಸಿಕೊಡುತ್ತಿದೆ. ಸರ್ವರೂ ಶಿಕ್ಷಣವನ್ನು ಪಡೆಯಲೇಬೇಕು ಅನ್ನುವಂತಹ ಘೋಷಣೆ ಇಟ್ಟಿದ್ದಾರೆ. ಆದರೆ ಆರ್ಥಿಕವಾಗಿ ಅತ್ಯಂತ ದುರ್ಬಲವಾಗಿರುವ ಡೊಂಬರು ಶಿಕ್ಷಣ ಪಡೆಯುವುದು ಕಷ್ಟಕರವಾಗಿದೆ.

ಹಿಂದಕ್ಕೆ ಅಲೆಮಾರಿಗಳಾಗಿದ್ದವರು ಇಂದು ನೆಲೆನಿಂತಿದ್ದರಿಂದ ಸುಲಭವಾಗಿ ಶಿಕ್ಷಣ ಪಡೆಯುವುದಕ್ಕೆ ದಾರಿಯಾದರೂ ಸಹ, ಮಕ್ಕಳನ್ನು ಶಾಲೆಗೆ ಕಲಿಸುವಷ್ಟು ಆರ್ಥಿಕವಾಗಿ ಇವರು ಸಬಲರಾಗಿಲ್ಲ. ಹೀಗಾಗಿ ಆರ್ಥಿಕವಾಗಿ ಸಬಲರಾದರೆ ಮಾತ್ರ ಶಿಕ್ಷಣದ ಕುರಿತು ಇವರ ಯಾಚಿಸಬಲ್ಲರು. ಸಮುದಾಯಗಳನ್ನು ಆರ್ಥಿಕವಾಗಿ ಸಬಲರನ್ನಾಗಿಸದೆ ಶೈಕ್ಷಣಿಕವಾಗಿ ಅವರನ್ನು ತಯಾರು ಮಾಡಲಾಗುವುದಿಲ್ಲ. ಬದಲಾಗುತ್ತಿರುವ ಜಾಗತಿಕ ವಿದ್ಯಮಾನಗಳಿಗನುಗುಣವಾಗಿ ಸಮುದಾಯದ ಬದುಕಿನಲ್ಲಿಯೂ ಇಂದು ತುಂಬಾ ಬದಲಾವಣೆ ಯಾಗಿದೆ. ವರ್ತಮಾನದ, ಹಲವಾರು ಕಸುಬುಗಳಿಗೆ ಹೊಂದಿಕೊಂಡಿದ್ದಾರೆ. ಉದಾ. ಬೇಸಾಯ ಕೃಷಿಕೂಲಿ, ಚಿಕ್ಕಪುಟ್ಟ ವ್ಯಾಪಾರ, ಬೇಲ್ದಾರ ಕೆಲಸ, ಖಾಸಗಿ ಕಂಪನಿಗಳಲ್ಲಿಯೂ ಸೇರಿಕೊಂಡಿದ್ದಾರೆ. ಹೀಗೆ ಬೇರೆ ಬೇರೆ ಕೆಲಸ ಕಾರ್ಯಗಳನ್ನು ಮಾಡುತ್ತಿರುವುದೇ ಅಲೆಮಾರಿ ಸಮುದಾಯಗಳಲ್ಲಿ

ಮಹತ್ತರವಾದ ಬದಲಾವಣೆಯನ್ನು ತರುತ್ತಿದೆ. ಹಳ್ಳಿಪಟ್ಟಣಗಳ ಬದುಕಿನ ಪರಿಸರಕ್ಕೆ ಹೊಂದಿಕೊಂಡಿದ್ದರೆ ಯಾವುದೇ ಒಂದು ಸಮುದಾಯದ ಮಹತ್ತರವಾದ ಬದಲಾವಣೆಯೆಂದರೆ ತನ್ನ ಮೂಲವೃತ್ತಿಯನ್ನು ಕಳಚಿಕೊಂಡು, ವರ್ತಮಾನದ ವೃತ್ತಿಗಳಿಗೆ ಹೊಂದಿಕೊಳ್ಳುವುದು ಮತ್ತು ಆ ವೃತ್ತಿಗಳಿಂದ ತಮ್ಮ ಆರ್ಥಿಕ ಜೀವನ ರೂಪಿಸಿಕೊಳ್ಳುವುದೇ ಒಂದು ಸಮುದಾಯದ ದೊಡ್ಡ ಪ್ರಯತ್ನವಾಗಿರುತ್ತದೆ. ಹೀಗೆ, ಬಳ್ಳಾರಿ, ಹೊಸಪೇಟೆ, ಕೂಡ್ಲಿಗಿ, ಸಂಡೂರು, ಬೂದುಗುಪ್ಪ, ದಿಬ್ಬದಹಳ್ಳಿ, ಮರಬನಹಳ್ಳಿ, ಕರ್‍ಣಾರಟ್ಟಿ ಇನ್ನೂ ಮುಂತಾದ ಕಡೆ ಡೊಂಬರು ಆಯಾ ಭಾಗದ ಜನಸಮುದಾಯದ ಜೊತೆ ಅಧಿಕ ಪ್ರಮಾಣದಲ್ಲಿ ಸೇರಿಹೋಗಿದ್ದಾರೆ. ಕಳೆದ ಒಂದು ತಲೆಮಾರಿನಿಂದ ಮತ್ತು ಅದಕ್ಕಿಂತ ಮೊದಲೇ ಪಸರಿಸಿದ ಕೆಲವು ಡೊಂಬರ ಮನೆತನದ ಜನ ಒಳ್ಳೆಯ ಕೃಷಿಕರಾಗಿದ್ದಾರೆ. ಶಾಲಾಕಾಲೇಜುಗಳನ್ನು ಸೇರಿ ಪದವೀಧರರಾಗಿ ಸ್ನಾತಕೋತ್ತರ ಪದವಿಗಳನ್ನು ಪಡೆದ ಕೆಲವರು ಉನ್ನತ ಹುದ್ದೆಗಳಲ್ಲಿ ಕೂಡ ಸೇರಿಕೊಂಡಿದ್ದಾರೆ. ಅಧ್ಯಾಪಕರಾಗಿದ್ದಾರೆ, ಶಿಕ್ಷಕರಾಗಿದ್ದಾರೆ, ಡಾಕ್ಟರುಗಳಿದ್ದಾರೆ. ಪೊಸ್ಟ್‌ಆಫೀಸಿನ ನೌಕರಿಯಲ್ಲಿದ್ದಾರೆ. ಹೀಗೆ ಈ ಸಮುದಾಯದ ಮಧ್ಯಮವರ್ಗವೇ ಪರಿವರ್ತನೆಯ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದೆ.

ಬದಲಾಗುತ್ತಿರುವ ಸಂದರ್ಭದಲ್ಲಿ ಡೊಂಬರು ಪುರಾತನ ಅಲೆಮಾರಿತನ ಮತ್ತು ಡೊಂಬರ ಮೂಲವೃತ್ತಿಯಾದ ಡೊಂಬರಾಟವನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದಾರೆ. ಇಂದು ಇತರ ಸಮುದಾಯಗಳ ಜನರಂತೆ ಸಾಮಾನ್ಯ ಜೀವನ ನಡೆಸುತ್ತಿದ್ದಾರೆ. ತಮಗೆ ಇಂದು ಲಾಭದಾಯಕವೆನಿಸಿದ ಹಲವಾರು ಕಸುಬುಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇಂದು ಈ ಸಮುದಾಯವನ್ನು ಅಲೆಮಾರಿಗಳೆಂದಾಗಲಿ ಮತ್ತು ಡೊಂಬರಾಟ ಆಡುವವರೆಂದಾಗಲಿ ಗುರುತಿಸಲಾಗದು. ಈ ಸಮುದಾಯವು ಇಂದು ಆಧುನಿಕ ಸಮೂಹ ಮಾಧ್ಯಮಗಳ ಪ್ರಭಾವಕ್ಕೆ ಸಿಲುಕಿ ಆಧುನಿಕ ಶೈಲಿಯ ಜೀವನ ನಡೆಸಲು ಮುಂದಾಗಿದೆ. ಹಿಂದಕ್ಕೆ ಇತರರು ತಮ್ಮನ್ನು ಸಮಾಜಕವಾಗಿ ಕೀಳಾಗಿ ಕಾಣುತ್ತಿದ್ದರು ಅನ್ನುವ ಭಾವನೆ ಇಂದು ಸಂಪೂರ್ಣವಾಗಿ ಸುಳ್ಳಾಗಿದೆ. ಇತರ ಸಮುದಾಯಗಳೊಂದಿಗೆ ಡೊಂಬರ ಸಮುದಾಯವು ಸಹ ಸಾಮಾಜಿಕವಾಗಿ ಉತ್ತಮ ರೀತಿಯಲ್ಲಿ ಗುರುತಿಸಿಕೊಂಡಿದೆ.

ಅಲೆಮಾರಿಗಳಾಗಿದ್ದಂತ ಸಂದರ್ಭದಲ್ಲಿ ಮತ್ತು ನೆಲೆನಿಂತ ಆರಂಭದ ಸ್ಥಿತಿಯಲ್ಲಿ ಸಮುದಾಯದಲ್ಲಿ ಮಹಿಳೆಯರನ್ನು ದೇವದಾಸಿಗೆ ಬಿಡುವ ಪದ್ಧತಿ ವಿಪರೀತವಾಗಿದ್ದಿತು. ಆದರೆ ಇಂದು ಬದಲಾಗುತ್ತಿರುವ ಬದುಕಿನ ಸಂದರ್ಭದಲ್ಲಿ ದೇವದಾಸಿ ಪದ್ಧತಿಯು ಮೆಲ್ಲಗೆ ಇಲ್ಲವಾಗುತ್ತಿದೆ. ಇಂದು ಅವರ ಭಾಷೆಯಲ್ಲಿ ಕೂಡ ವಿಪರೀತ ಬದಲಾವಣೆಗಳಾಗಿವೆ. ಈ ಸಮುದಾಯದಲ್ಲಿನ ಪ್ರತಿಯೊಬ್ಬರೂ ಕನ್ನಡವನ್ನೇ ಮಾತೃಭಾಷೆಯಾಗಿ ಮಾತನಾಡುತ್ತಿದ್ದಾರೆ. ಕನ್ನಡವನ್ನು ಬಿಟ್ಟರೆ ಇತರೆ ಯಾವ ಭಾಷೆಗಳು ಬರುವುದಿಲ್ಲ ಎನ್ನುತ್ತಾರೆ. ರಾಜಕೀಯ ಮೀಸಲಾತಿಯಿಂದಾಗಿ ಈ ಸಮುದಾಯದಲ್ಲಿ ಪಟ್ಟಣ ಪಂಚಾಯಿತಿಯ

ಅಧ್ಯಕ್ಷರಾಗಿದ್ದಾರೆ, ಗ್ರಾಮಪಂಚಾಯತಿಯ ಸದಸ್ಯರೂ ಕೂಡ ಆಗಿದ್ದಾರೆ. ಹೀಗೆ ಬದಲಾಗುತ್ತಿರುವ ಅಲೆಮಾರಿಗಳ ಬದುಕು ಇಂದು ಆಧುನಿಕ ವಿಚಾರಧಾರೆಯ ಮೂಲಕ ಸಾಗುತ್ತಿದೆ. ಅಲ್ಲದೆ ಸಮುದಾಯದ ಜಾತಿಸಂಘಟನೆಯು ಸಮುದಾಯದ ನ್ಯಾಯಯುತ ಹಕ್ಕುಗಳು ಪಡೆಯುವಲ್ಲಿ ಹೋರಾಡಲು ಪ್ರಯತ್ನಿಸುತ್ತಿದೆ.

ಆದರೆ, ಬದಲಾಗುತ್ತಿರುವ ಜಾಗತಿಕ ಸಂದರ್ಭದ ಅಬ್ಬರದಲ್ಲಿ ಡೊಂಬರದು ಒಂದು ಕ್ಷೀಣ ಧ್ವನಿ. ಜಾಗತೀಕರಣವೇ ಪ್ರಬಲರ ರಾಜಕೀಯ ಹುನ್ನಾರು, ಜಾಗತೀಕರಣವು ಉಳ್ಳವರು ತಯಾರಿಸಿದ ವಸ್ತುಗಳನ್ನು ಕೊಳ್ಳುವಂತೆ ಮಾಡುವ ಬೃಹತ್ ಮಾರುಕಟ್ಟೆ ನೀತಿಯನ್ನು ರೂಪಿಸುವ ನವವಸಾಹತುಶಾಹಿ ದೇಶಗಳ ರಾಜಕೀಯ ನೀತಿಯಾಗಿದೆ. ಇಲ್ಲಿ ದೇಶೀಯ ಬಂಡವಾಳಿಗರೇ ದಿಕ್ಪಾಪಾಲಾಗುತ್ತಿದ್ದಾರೆ. ಸರ್ಕಾರ ತನ್ನ ಹಲವು ಮಹತ್ವದ ಜವಾಬ್ದಾರಿಗಳನ್ನು ನಿಭಾಯಿಸಲಾಗದೆ ಖಾಸಗೀಕರಣಕ್ಕೆ ಮೊರೆ ಹೋಗುತ್ತಿದೆ. ವಿದೇಶೀ ಕಂಪನಿಗಳು ದೇಶದ ಮಾನವ ಮತ್ತು ನೈಸರ್ಗಿಕ ಸಂಪನ್ಮೂಲಗಳನ್ನು ಕೊಳ್ಳೆಹೊಡೆಯಲು ಮುನ್ನುಗ್ಗುತ್ತಿವೆ. ದೇಶದ ಸಂವಿಧಾನದ ಮೂಲಭೂತ ತತ್ವಗಳ ಮೇಲೆಯೇ ಅತ್ಯಾಚಾರಗಳು ನಡೆಯುತ್ತಿವೆ ಮೀಸಲಾತಿಯಂತಹ ಸಂವಿಧಾನದ ಮಹತ್ವದ ಸಂಗತಿಯನ್ನೇ ಜಾಗತೀಕರಣ ನುಂಗಿ ಹಾಕುತ್ತಿದೆ. ಆದ್ದರಿಂದ ಬದಲಾಗುತ್ತಿರುವ ಜಾಗತಿಕ ಸಂದರ್ಭವು ಮೂರನೇ ಜಗತ್ತಿನ ದೇಶಗಳಿಗೆ ಮಾರಕವಾಗಿದೆ. ಇನ್ನು ಮೂರನೇ ಜಗತ್ತಿನ ದೇಶಗಳ ದುರ್ಬಲ ಸಮುದಾಯಗಳಿಗೆ ಜಾಗತೀಕರಣ ವ್ಯವಸ್ಥೆಯಲ್ಲಿ ವಿಮೋಚನೆಯ ಹಾದಿಗಳು ದೊರಕಲು ಸಾಧ್ಯವೇ ಈ ಪ್ರಶ್ನೆ? ಎಲ್ಲರ ಮುಂದಿದೆ.

□□

**ಟಿಪ್ಪಣಿಗಳು**

೧. ಡೊಂಬರ ಸಂಸ್ಕೃತಿ, ದೇವೇಂದ್ರಕೂಮಾರ್ ಹಕಾರಿ, ಪು.೫೭

೨. ಡೊಂಬರ ಸಂಸ್ಕೃತಿ, ದೇವೇಂದ್ರಕೂಮಾರ್ ಹಕಾರಿ, ಪು.೧೧೪

೩. ದಲಿತರು ಮತ್ತು ಜಾಗತೀಕರಣ, ಮೊಗಳ್ಳಿ ಗಣೇಶ್, ಪು.೧೫೮

೪. ದಲಿತರು ಮತ್ತು ಜಾಗತೀಕರಣ, ಮೊಗಳ್ಳಿ ಗಣೇಶ್, ಪು.೧೫೭

೫. ಡೊಂಬರ ಸಂಸ್ಕೃತಿ, ದೇವೇಂದ್ರಕೂಮಾರ್ ಹಕಾರಿ, ಪು.೪೭

೬. ಡೊಂಬರ ಸಂಸ್ಕೃತಿ, ದೇವೇಂದ್ರಕೂಮಾರ್ ಹಕಾರಿ, ಪು.೪೮

ಅಧ್ಯಾಯ ೪

# ಬಳ್ಳಾರಿ ಜಿಲ್ಲೆಯ ಡೊಂಬರ ಆರ್ಥಿಕ ಸ್ಥಿತಿಗತಿಗಳು

ಬಳ್ಳಾರಿ ಜಿಲ್ಲೆಯ ಡೊಂಬರ ಆರ್ಥಿಕ ಸ್ಥಿತಿಯನ್ನು ನಿರ್ಧರಿಸುವ ಅಂಶಗಳೆಂದರೆ ಅವರ ಕಸುಬುಗಳು, ಭೂಹಿಡುವಳಿ, ಸಾಮಾಜಿಕ, ಶೈಕ್ಷಣಿಕ ಮತ್ತು ರಾಜಕೀಯ ಹಾಗೂ ಧಾರ್ಮಿಕ ಸ್ಥಾನಮಾನಗಳು. "ಡೊಂಬರು ಹಿಂದಕ್ಕೆ ಗುಂಪು ಗುಂಪಾಗಿ ಜೀವನ ನಡೆಸುತ್ತಿದ್ದರು."[೧] ಹಾಗೆ ಒಟ್ಟಿಗೆ ಸೇರಿ ಉತ್ಪಾದನೆ ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಇವರ ಆರ್ಥಿಕ ಮೂಲ ಡೊಂಬರಾಟ ಆಡುವುದೇ ಆಗಿತ್ತು. ಇಂದು ಆ ವೃತ್ತಿಯನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟಿದ್ದಾರೆ, ಕಾರಣ ತುಂಬಾ ಸ್ಪಷ್ಟವಾಗಿದೆ. ಡೊಂಬರಾಟದ ಸ್ಥಾನದಲ್ಲಿ ಆಧುನಿಕ ಸರ್ಕಸ್ ಕಂಪನಿಗಳು, ಜನರನ್ನು ಬೆರಗುಗೊಳಿಸುವ ತಂತ್ರಜ್ಞಾನಗಳ ಮುಂದೆ ಡೊಂಬರ ಪಾರಂಪರಿಕ ಡೊಂಬರಾಟ ಕಳಪೆಯಾಯಿತು. ಸಮಾಜ ಬೆಳೆದಂತೆಲ್ಲ ಡೊಂಬರ ಸಾಂಪ್ರದಾಯಿಕ ವೃತ್ತಿಗೆ ಸಮಾಜದಲ್ಲಿ ಸಹಜವಾಗಿ ಲಭಿಸುತ್ತಿದ್ದ ಸ್ಥಾನಮಾನಗಳೂ ಲಭ್ಯವಾಗದೇ ಹೋದವು. ಈ ಎಲ್ಲ ಕಾರಣಗಳಿಂದಾಗಿ ಡೊಂಬರು ತಮ್ಮ ಪಾರಂಪರಿಕ ವೃತ್ತಿಯನ್ನು ಬಿಟ್ಟುಕೊಡ ಬೇಕಾಯಿತು. ಪ್ರಸ್ತುತ ಸಂದರ್ಭದಲ್ಲಿ ಡೊಂಬರ ಆರ್ಥಿಕಸ್ಥಿತಿ ತುಂಬ ಹದಗೆಟ್ಟಿದೆ, ಎಂಬ ಪ್ರಮುಖ ಅಂಶವನ್ನು ಮಾತ್ರ ಕಡೆಗಣಿಸುವಂತಿಲ್ಲ. ಮೂಲತಃ ಡೊಂಬರು ನಿಶ್ಚಿತ ಆರ್ಥಿಕ ಮೂಲದಿಂದ ವಂಚಿತರಾಗಿ ಸಾಮಾಜಿಕವಾಗಿ ಅತಿ ಕೆಳಸ್ಥರದಲ್ಲಿಯೇ ಉಳಿದಿದ್ದರಿಂದ ಅವರ ಆರ್ಥಿಕ ಸ್ಥಿತಿಗತಿಯ ಮೇಲೆ ಅಗಾಧ ಪೆಟ್ಟುಬಿದ್ದಿತು.

ಡೊಂಬರು ಇಂದು ಕೃಷಿಯನ್ನು ಆರ್ಥಿಕ ಮೂಲಧಾರವೆಂದು ನಂಬಿಕೊಂಡು ಜೀವನ ಸಾಗಿಸಲು ಹೊರಟಿದ್ದಾರೆ. "ದೇಶದ ಕೃಷಿ ಉತ್ಪಾದನೆ ದೃಷ್ಟಿಯಿಂದ ತೀರ ಹಿಂದುಳಿದಿದೆ."[೨] ಡೊಂಬರು ಬೆಳೆದ ಕೃಷಿ ವಸ್ತುಗಳಿಗೆ ಮಾರುಕಟ್ಟೆಯಲ್ಲಿ ಸರಿಯಾದ ಬೆಲೆ ಸಿಗದೇ, ಆರ್ಥಿಕ ಸಂಕಷ್ಟಕ್ಕೆ ಒಳಗಾಗಿದ್ದಾರೆ. ಇಂದು ಕೃಷಿಯನ್ನೆ ನಂಬಿದ ಅನೇಕ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು. ಇಂದು ಸಾಮಾನ್ಯ

ಸಂಗತಿಯೇ ಆಗಿದೆ, ಹೀಗಾಗಿ ಕೃಷಿಯ ಮೇಲೆ ಜೀವನ ನಡೆಸುತ್ತಿರುವ ಇವರ ಜೀವನ ಮತ್ತು ಆರ್ಥಿಕಮಟ್ಟ ಕುಂಠಿತವಾಗಿರುತ್ತದೆ. ಬಳ್ಳಾರಿ ಜಿಲ್ಲೆಯ ಡೊಂಬರು ಇಂದು ಹಲವೆಡೆ ಕೃಷಿಕಾರ್ಮಿಕರಾಗಿ ಮತ್ತು ಚಿಕ್ಕಹಿಡುವಳಿದಾರರಾಗಿ ನೆಲೆ ನಿಂತಿದ್ದಾರೆ. ಅಲ್ಲದೆ ಕೆಲವು ಕಡೆ ಕರಕುಶಲ ವಸ್ತುಗಳ ತಯಾರಿಕೆ ಮುಂತಾದ ಚಿಕ್ಕಪುಟ್ಟ ಕೆಲಸಗಳಲ್ಲಿ ತೊಡಗಿಕೊಂಡಿದ್ದಾರೆ. ಅಲೆಮಾರಿಗಳಾಗಿದ್ದ ಇವರು, ಈ ಜಿಲ್ಲೆಯ ಕೆಲವು ಹಿಂದುಳಿದ ಪ್ರದೇಶಗಳಲ್ಲಿ ನೆಲೆನಿಂತಿದ್ದಾರೆ. ಕೂಡ್ಲಿಗಿಯ ಕುರುಚಲು ಕಾಡು ಪ್ರದೇಶದಲ್ಲಿ, ಶಿರುಗುಪ್ಪ ತಾಲೂಕಿನ ದೂರದ ಪ್ರದೇಶದಲ್ಲಿ ಡೊಂಬರು ವಾಸಿಸುತ್ತಿದ್ದಾರೆ. ಈಗ್ಗೆ ಸುಮಾರು ಎಪ್ಪತ್ತು ಎಂಬತ್ತು ವರ್ಷಗಳ ಹಿಂದೆ ನೆಲೆನಿಂತ ಡೊಬರಿಗೆ ಸಹಜವಾಗಿಯೇ ಭೂಮಿ ಲಭ್ಯವಾಗಿಲ್ಲ. ಅವರು ಕೃಷಿಕೂಲಿಗಳಾಗಿಯೇ, ದಿನಗೂಲಿಗಳಾಗಿಯೇ ಬದುಕುತ್ತಿದ್ದಾರೆ. ಇಲ್ಲವೆ ಕೃಷಿಗೆ ಪೂರಕವಾದ ಸಾಮಾಗ್ರಿಗಳನ್ನು ತಯಾರಿಸುವ ಕಮ್ಮಾರರಾಗಿಯೋ ಬಡಗಿಗಳಾಗಿಯೋ ಪರಿವರ್ತನೆಗೊಂಡಿದ್ದಾರೆ. “ಮೂಲತಃ ಅಲೆಮಾರಿ ಯಾದ ಈ ಸಮುದಾಯವು ಇತ್ತೀಚೆಗೆ ಒಂದೇ ಕಡೆ ನೆಲೆನಿಂತು ವಾಸಮಾಡಲು ಆರಂಭಿಸಿದೆ.”[೩] ಹೀಗಾಗಿ ನಿವೇಶನ ವಸತಿಯ ತೊಂದರೆಯನ್ನು ಅನುಭವಿಸುತ್ತಿದ್ದಾರೆ. ಅನುಭೋಗ ಮಟ್ಟವು ತುಂಬಾ ಕಡಿಮೆ ಇದೆ. ಡೊಂಬರ ಸಮುದಾಯದಲ್ಲಿ ಶೇ. ೯೯ರಷ್ಟು ಜನ ಭೂಹೀನರಾಗಿದ್ದಾರೆ. ಮತ್ತು ನಿರ್ದಿಷ್ಟವಾದ ಯಾವ ಆರ್ಥಿಕ ಮೂಲವನ್ನು ಇವರು ಹೊಂದಿಲ್ಲ. ಹಾಗಾಗಿ ಇವರ ಆರ್ಥಿಕ ಪರಿಸ್ಥಿತಿ, ಬಡತನ ರೇಖೆಗಿಂತಲೂ ತುಂಬಾ ಕೆಳಮಟ್ಟದಲ್ಲಿದೆ.

ಇಂಥಹವರು ಕೂಲಿಯನ್ನು ನಂಬಿ ಜೀವನ ಸಾಗಿಸುತ್ತಿದ್ದಾರೆ. ವರ್ತಮಾನದಲ್ಲಿ ಈ ಸಮುದಾಯದ ಸ್ಥಿತಿ ಅತ್ಯಂತ ಶೋಚನೀಯವಾಗಿದೆ. ಜಾಗತೀಕರಣದ ಇಂದಿನ ಕಾಲಘಟ್ಟದಲ್ಲಿ ಈಬಗೆಯ ಅಲೆಮಾರಿಗಳನ್ನು ಭಾರತದ ರಾಜಕಾರಣ ಗಮನಿಸುವ ಗೋಜಿಗೇ ಹೋಗಿಲ್ಲ. ಡೊಂಬರು ಚಾರಿತ್ರಿಕವಾಗಿ ನಂಬಿಕೊಂಡು ಬಂದಿದ್ದ ವೃತ್ತಿ ವರ್ತಮಾನದಲ್ಲಿ ಅನುತ್ಪಾದಕವಾದ ಮೇಲೆ ಡೊಂಬರು ನಿಶ್ಚಿತ ಆರ್ಥಿಕ ಮೂಲಗಳನ್ನು ಕಂಡುಕೊಳ್ಳಲು ಹೆಣಗುತ್ತಿದ್ದಾರೆ. ಈ ಮೇಲಿನ ಎಲ್ಲಾ ತೊಂದರೆಗಳನ್ನು ಡೊಂಬರ ಸಮುದಾಯ ಅನುಭವಿಸುತ್ತಿದೆ. ಬಳ್ಳಾರಿ ಜಿಲ್ಲೆಯ ಡೊಂಬರ ಆರ್ಥಿಕ ಸ್ಥಿತಿಯು ಏಕಪ್ರಕಾರವಾಗಿಲ್ಲ. ಹಲವಾರು ವೃತ್ತಿ ಕಸಬುಗಳಲ್ಲಿ ಹರಿದು ಹಂಚಿಹೋಗಿದ್ದಾರೆ. ಹಲವಾರು ಕೃಷಿಕರಾಗಿದ್ದಾರೆ. ಬಹುಸಂಖ್ಯಾತ ಜನರು ಭೂಮಾಲಿಕರ ಹೊಲಗದ್ದೆಗಳಲ್ಲಿ ಬಿಸಿಲಿಗೆ ಮೈಯೊಡ್ಡಿ ದುಡಿಯುತ್ತಿದ್ದಾರೆ. ಆದರೆ ಇವರಿಗೆ ಸಿಗುವ ಕೂಲಿ, ತಮ್ಮ ಕುಟುಂಬದ ಜೀವನ ನಿರ್ವಹಿಸುವುದಕ್ಕೆ ಸಾಕಾಗುತ್ತಿಲ್ಲ. ಮತ್ತೆ ಕೆಲವರು ಚಿಕ್ಕಪುಟ್ಟ ವ್ಯಾಪಾರ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ ಹಲವರು ಸರ್ಕಾರಿ ಉದ್ಯೋಗದಲ್ಲಿ ಇದ್ದಾರೆ. ಉಳಿದ ೯೯ರಷ್ಟು ಕುಟುಂಬಗಳು ಇನ್ನೂ ಬಡತನ ರೇಖೆಗಿಂತ ಕಡಿಮೆ ಮಟ್ಟದಲ್ಲಿಯೇ ಇವೆ. ಹೀಗಾಗಿ

ಪ್ರಸ್ತುತ ಸಂದರ್ಭದಲ್ಲಿ ಡೊಂಬರ ಆರ್ಥಿಕ ಜೀವನ ತುಂಬಾ ಚಿಂತಾಜನಕವಾಗಿದೆ. ಬಡತನ ರೇಖೆಯ ಕೆಳಗಿರುವ ಇಷ್ಟು ಜನರಿಗೆ ಇದುವರೆಗೂ ಸರಕಾರವು ಯಾವುದೇ ರೀತಿಯ ಸೌಲಭ್ಯಗಳನ್ನು ಕೂಡ ಕಲ್ಪಿಸಿಕೊಟ್ಟಿಲ್ಲ. ಈ ಸಮುದಾಯದಲ್ಲಿ ಅವಿದ್ಯಾವಂತರ ಸಂಖ್ಯೆ ಅಧಿಕವಾಗಿರುವುದರಿಂದ ಸರಕಾರಿ ಸೌಲಭ್ಯಗಳನ್ನು ಹೇಗೆ ಪಡೆಯಬೇಕು. ಎನ್ನುವಂತಹ ಜಾಣ್ಮೆಯೂ ಕೂಡ ಇವರಿಗಿಲ್ಲ. ಹೀಗಾಗಿ ಡೊಂಬರ ಸಮುದಾಯವು ಆರ್ಥಿಕ ಪರಿಸ್ಥಿತಿಯಿಂದ ಬಳಲುತ್ತಿದೆ.

ದಲಿತರು ಹೊಂದಿರುವ ಭೂಹಿಡುವಳಿಯ ಸ್ಥಿತಿಯು ಸಹ ಶೋಚನೀಯವಾಗಿದೆ. ಭಾರತ ಮಟ್ಟದಲ್ಲಿ ದಲಿತೇತರರು ಶೇ. ೮೨.೮ ಭೂಮಿಯನ್ನೇ ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದಾರೆ. ದಲಿತರು ಶೇ.೭ರಷ್ಟು ಭೂಮಿ ಪಡೆದಿದ್ದಾರೆ ಅವರಲ್ಲಿ ಶೇ. ೭೦ರಷ್ಟು ದಲಿತರು ಒಂದು ಹೆಕ್ಟರ್‌ಗಿಂತ ಕಡಿಮೆ ಭೂಮಿ ಹೊಂದಿದ್ದಾರೆ. ದಲಿತರ ಸಮಾಜಿಕ ಆರ್ಥಿಕ ಸ್ಥಿತಿಗತಿ ಅತ್ಯಂತ ಹೀನ ಪರಿಸ್ಥಿತಿಯಲಿದ್ದು. ಇಂಡಿಯಾದ ದರಿದ್ರಾರೇಖೆಯ ಕೆಳಗಿರುವವರು ಶೇ. ೪೮ ಇದ್ದಾರೆ ದಲಿತರಲ್ಲಿ ಶೇ. ೭೦ಕ್ಕಿಂತಲೂ ಹೆಚ್ಚು ಹಳ್ಳಿಗಾಡಿನಲ್ಲಿ ಕೃಷಿಕಾರ್ಮಿಕರಾಗಿ ದುಡಿಯುತ್ತಿರುವವರು ಒಪ್ಪೊತ್ತಿನೂಟಕ್ಕಾಗಿ ಉದ್ಯೋಗವನ್ನರಸುತ್ತಾ ಅಲೆಮಾರಿ ಜೀವನ ನಡೆಸುತ್ತಿದ್ದಾರೆ. ಆರ್ಥಿಕ ಅವಲಂಬಿತನವು ಒಟ್ಟು ಬೆಳವಣಿಗೆಗೆ ಮುಖ್ಯ ತಡೆಯಾಗಿದ್ದು ಸಾಮಾಜಿಕ ಸಮಸ್ಯೆಯನ್ನು ನಿಭಾಯಿಸುವ ಮುನ್ನ ಇದನ್ನೇ ಗಮನಿಸಬೇಕಾಗಿದೆ. ಶೇ.೨೦ರಷ್ಟು ಜನಸಂಖ್ಯೆಯ ದಲಿತರು ರಾಜ್ಯದಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ಎರಡು ಎಕರೆಗಿಂತ ಕಡಿಮೆ ಭೂಮಿ ಹೊಂದಿದ್ದು ಉಳಿದವರು ಭೂಹೀನರಾಗಿದ್ದಾರೆ. ಆರ್ಥಿಕ ಸ್ವಾಲಂಬಿತನಕ್ಕಾಗಿ ಹೆಚ್ಚಿನ ದಲಿತರು ರಾಜ್ಯಾದ್ಯಾಂತ ಸರಕಾರಿ ಭೂಮಿಯನ್ನೆ ಆಕ್ರಮಿಸಿಕೊಂಡಿದ್ದಾರೆ. ಅನಧಿಕೃತವಾಗಿ ಸಾಗುವಳಿ ಮಾಡಿರುವ ಭೂಮಿಯನ್ನು ಸಕ್ರಮಗೊಳಿಸಬೇಕೆಂದು ಚಳುವಳಿಯ ಬಹುಮುಖ್ಯ ಬೇಡಿಕೆ ಇದು ಸುಮಾರು ವರ್ಷಗಳಿಂದ ನೆನೆಗುದಿಗೆ ಬಿದ್ದಿದೆ.

ರಾಜಶಾಹಿಯ ಕಾಲಘಟ್ಟದಲ್ಲಿ ಡೊಂಬರಿಗೆ ಉಂಬಳಿಯಾಗಿ ಸ್ವಲ್ಪ ಭೂಮಿ ಸಿಕ್ಕಿರುವ ದಾಖಲೆಗಳಿವೆ. ಆದರೆ ಎಲ್ಲಿಯೂ ನೆಲೆನಿಲ್ಲದ ಡೊಂಬರು ಭೂಮಿಯನ್ನು ದಕ್ಕಿಸಿಕೊಳ್ಳಲಾಗಿಲ್ಲ. ಜಿಲ್ಲೆಯ ಒಟ್ಟು ಭೂಹಂಚಿಕೆಯನ್ನು ಗಮನಿಸಿದಾಗ ಡೊಂಬರ ಭೂಹಿಡುವಳಿಯು ಅತ್ಯಂತ ಶೋಚನೀಯವಾಗಿದೆ. ಮಧ್ಯಕಾಲದಲ್ಲಿಯೇ ಭೂಮಿ ರಾಜ್ಯಗಳ ಸಂಪತ್ತನ್ನು ನಿರ್ಧರಿಸುವ ನಿರ್ಧಾರಕ ಆರ್ಥಿಕ ಮೂಲವಾದ ತಕ್ಷಣ, ಭೂಒಡೆತನವೆಂಬುದು ಕೆಲವೇ ಜನರ ಹಕ್ಕಾಯಿತು. ಸಹಜವಾಗಿಯೇ ಕೃಷಿಕರಾದ ಕೆಳಜಾತಿಗಳಿಗೆ ಭೂಮಿಯ ಹಕ್ಕನ್ನು ನಿರಾಕರಿಸಲಾಯಿತು. ಹೊಲೆಮಾದಿಗರಿಗಂತೂ ಭೂಮಿಯ ಒಡೆಯರಾಗುವುದು ಎಂದರೆ ಒಂದು ಬೃಹತ್ ಸಾಮಾಜಿಕ ಪಾಪವೆಂದೇ ಪರಿಗಣಿಸಲಾಯಿತು. ಇನ್ನು ಅಲೆಮಾರಿಗಳಾದ

ಡೊಂಬರಿಗೆ ಸಹಜವಾಗಿಯೇ ಭೂಮಿ ಸಿಗಲಿಲ್ಲ. ಅವರು ಕೆಲವು ಕರಕುಶಲ ವಸ್ತುಗಳ ತಯಾರಿಕೆಯಲ್ಲಿ ಚಿಕ್ಕಪುಟ್ಟ ವ್ಯಾಪಾರಗಳಲ್ಲಿ ತೊಡಗಿಕೊಂಡರು.

## ಅ. ಬಳ್ಳಾರಿಯ ಜಿಲ್ಲೆಯ ಡೊಂಬರ ಕಸಬುಗಳು

ಡೊಂಬರು ಎಂದಾಕ್ಷಣ ಡೊಂಬರಾಟ ಆಡುವವರೆಂದು ಜನರು ಕಲ್ಪನೆ ಮಾಡಿಕೊಳ್ಳುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಡೊಂಬರು ತಮ್ಮ ಮೂಲ ಕಸುಬಾದ ಡೊಂಬರಾಟ ಮಾಡುವುದಿಲ್ಲ. ಬದಲಾಗಿ ಇಂದು ಇವರು ಹಲವಾರು ಕಸಬುಗಳಲ್ಲಿ ತೊಡಗಿಕೊಂಡಿದ್ದಾರೆ. ಇಂಥಹದೇ ಎಂದು ನಿರ್ದಿಷ್ಟವಾದ ಯಾವ ಕಸಬು ಮಾಡುವುದಿಲ್ಲ. ಇಂದು ಹಲವಾರು ವೃತ್ತಿಗಳಲ್ಲಿ ಅಥವಾ ಕಸಬುಗಳಲ್ಲಿ ತೊಡಗಿದ್ದಾರೆ.

ಇಂದಿನ ಜಾಗತೀಕರಣದ ಪ್ರಭಾವದಿಂದಾಗಿ ವಿದೇಶಿ ಕಂಪನಿಗಳ ಆಗಮನದಿಂದಾಗಿ ಸ್ವದೇಶಿ ಕೈಗಾರಿಕೆಗಳು ಮತ್ತು ಕರಕುಶಲ ಕಲೆಗಳು ಮತ್ತು ಸಮುದಾಯಗಳು ಸಹ ಸಂಪೂರ್ಣವಾಗಿ ನಶಿಸಿ ಹೋಗಿವೆ. ಅವುಗಳ ಮೂಲ ಸಹ ಇಂದು ಸಿಗುವುದಿಲ್ಲ. ಹೀಗಾಗಿ ಡೊಂಬರ ಕುಲಕಸಬು ಇಲ್ಲದಂತಾಗಿದೆ. ಇದರಿಂದಾಗಿ ಡೊಂಬರು ತಮ್ಮ ಜೀವನೋಪಾಯಕ್ಕಾಗಿ ಎಲ್ಲಾ ಕಸುಬುಗಳನ್ನು ಮಾಡಲು ಪ್ರಯತ್ನಿಸುತ್ತಿದ್ದಾರೆ.

### ಭೂಹಿಡುವಳಿ

ಇಂದು ಡೊಂಬರು ಹೆಚ್ಚಾಗಿ ಕೃಷಿ ಸಂಬಂಧಿಸಿದ ಕೆಲಸಗಳಲ್ಲಿ ಜನರು ತೊಡಗಿಕೊಂಡಿದ್ದಾರೆ. ಇವರ ಸಂಖ್ಯೆ ಜಿಲ್ಲೆಯಲ್ಲಿ ಶೇ. ೬ ರಷ್ಟಿದೆ. ಇವರು ಅತಿ ಚಿಕ್ಕ ಹಿಡುವಳಿಗಳನ್ನು ಹೊಂದಿದ್ದು, ತಮ್ಮ ಉಪ ಜೀವನಕ್ಕಾಗಿ ಬೇಸಾಯ ಮಾಡುತ್ತಿದ್ದಾರೆ. ಅಂದರೆ ಇಂದು ಇವರು ಕೃಷಿ ಕಸುಬಿನಲ್ಲೂ ನಂಬಿಕೆ ಕಳೆದುಕೊಂಡಿದ್ದಾರೆ. ಇಡೀ ವರ್ಷಪೂರ್ತಿ ಹೊಲದಲ್ಲಿ ಸತತವಾಗಿ ದುಡಿದರೂ, ಪ್ರತಿಫಲ ಮಾತ್ರ ತೀರ ಕಡಿಮೆ ಇದೆ. ವ್ಯವಸಾಯಕ್ಕಾಗಿ ತಂದ ಸಾಲ ತೀರಿಸಲಿಕ್ಕೂ ಇವರಿಂದಾಗುತ್ತಿಲ್ಲ. ಇದಕ್ಕೆ ಹಲವಾರು ಕಾರಣಗಳಿವೆ. ಅತ್ಯಂತ ಚಿಕ್ಕ ಹಿಡುವಳಿದಾರರಾಗಿರುವ ಡೊಂಬರು ಇಂದು ಕೃಷಿಕರಾಗಿ ಬದುಕಲಾಗುತ್ತಿಲ್ಲ. ಕಾರಣ ಜಾಗತೀಕರಣದ ಇವತ್ತಿನ ಸಂದರ್ಭದಲ್ಲಿ ಭಾರತದ ಕೃಷಿ ಉತ್ಪನ್ನಗಳ ಬೆಲೆಗಳು ಕುಸಿದು ಹೋಗಿವೆ. ಭೂಮಾಲಿಕರೇ ತಮ್ಮ ಜಮೀನುಗಳನ್ನು ಮಾರಿ ಬಂಡವಾಳಶಾಹಿ ಗಳಾಗುತ್ತಿರುವ ಈ ಸಂದರ್ಭದಲ್ಲಿ, ಒಂದು ಎರಡೆಕೆರೆ ಹೊಲ ಹೊಂದಿದ ಡೊಂಬರು ಇಂದಿನ ಸ್ಪರ್ಧಾ

ಜಗತ್ತಿನಲ್ಲಿ ಏನು ತಾನೇ ಮಾಡಿಯಾರು. ದೊಡ್ಡ ದೊಡ್ಡ ರೈತರೇ ತಮ್ಮ ಉತ್ಪನ್ನಗಳಿಗೆ ಬೆಲೆ ಸಿಗದೆ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಸಂದರ್ಭದಲ್ಲಿ, ಈ ಚಿಕ್ಕ ಹಿಡುವಳಿದಾರರು ದಿಕ್ಕೆಟ್ಟು ಹೋಗಿದ್ದಾರೆ. ಬಳ್ಳಾರಿ ಜಿಲ್ಲೆಯ ಒಟ್ಟು ಕೃಷಿ ಭೂಮಿಯಲ್ಲಿ ಡೊಂಬರ ಒಡೆತನದಲ್ಲಿರುವ ಭೂಮಿಯು ಶೆ. ೨ ರಷ್ಟಿ ಇದೆ. ಇದು ಇವರ ಒಡೆತನಕ್ಕೆ ಸಿಕ್ಕಿ ಭೂಮಿಯು ತೀರಾ ಹಿಂದುಳಿದ ನೀರಾವರಿ ಸೌಲಭ್ಯದಿಂದ ಶಾಶ್ವತವಾಗಿ ವಂಚಿತವಾಗಿರುವ, ಬಂಜರು ಪ್ರದೇಶದ ಭೂಮಿಯೇ ಆಗಿದೆ. ಹೀಗಾಗಿ ಕೃಷಿ ಉತ್ಪನ್ನಗಳಿಂದ ಡೊಂಬರು ತಮ್ಮನ್ನು ಪೋಷಿಸಿಕೊಳ್ಳುವ ಸ್ಥಿತಿಯಲ್ಲೇನು ಇಲ್ಲ.

### ಆ. ಕೃಷಿ ಸಂಬಂಧಿ ಚಟುವಟಿಕೆಗಳು

ಡೊಂಬರು ಮತ್ತು ಭೂಹಿಡುವಳಿಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯಾಧಾರಿತ ಮಾಹಿತಿಯ ಪ್ರಕಾರ ಭೂಹಿಡುವಳಿ ಹೊಂದಿದವರು ಶೇ. ೫ ರಷ್ಟು ಇದ್ದರೆ, ಇದರಲ್ಲಿ ಶೇ. ೩ರಷ್ಟು ಒಂದು ಎಕರೆಗಿಂತಲೂ ಕಡಿಮೆ ಭೂಮಿಯನ್ನು ಹೊಂದಿದ್ದಾರೆ. ಉಳಿದ ಶೇ. ೨ರಷ್ಟು ಕೃಷಿಕರು ೫ ಎಕರೆಗಿಂತಲೂ ಕಡಿಮೆ ಭೂಹಿಡುವಳಿ ಹೊಂದಿದ್ದಾರೆ. ಉಳಿದ ಶೇ. ೯೫ ರಷ್ಟು ಜನರು ಭೂಹೀನರಾಗಿ ಉಳಿದಿದ್ದಾರೆ.

ಕ್ಷೇತ್ರಕಾರ್ಯದಲ್ಲಿ ನಾನು ಪಡೆದ ಮಾಹಿತಿಯ ಪ್ರಕಾರ, ಡೊಂಬರು ವಾಸಮಾಡುತ್ತಿರುವ ಪ್ರದೇಶಗಳಲ್ಲಿ ವಾಸಮಾಡುತ್ತಿರುವ ಎಲ್ಲಾ ಸಮುದಾಯಗಳು ಹೊಂದಿರುವ ಭೂಹಿಡುವಳಿಯ ಅಂದಾಜಿನ ಮಾಹಿತಿಯಂತೆ, ಮೊದಲನೆ ಸ್ತರದಲ್ಲಿ ಅಧಿಕ ಭೂಹಿಡುವಳಿ ಹೊಂದಿರುವ ಸಮುದಾಯಗಳೆಂದರೆ, ಲಿಂಗಾಯಿತರು, ಒಕ್ಕಲಿಗರು, ರೆಡ್ಡಿಯರು, ಕಮ್ಮಾರರು, ಶೆಟ್ಟರು, ಬ್ರಾಹ್ಮಣರು, ಮುಂತಾದವರು ಬರುತ್ತಾರೆ. ಎರಡನೆ ಸ್ತರದಲ್ಲಿ ಬರುವ ಸಮುದಾಯಗಳೆಂದರೆ, ಭೂಹಿಡುವಳಿಗೆ ಸಂಬಂಧಿಸಿದಂತೆ ಕುರುಬರು, ನಾಯಕರು, ಉಪ್ಪಾರರು, ಬಡಿಗೇರರು, ಮುಸ್ಲಿಮರು ಇನ್ನು ಹಲವಾರು ಈ ಸ್ತರದಲ್ಲಿ ಬರುತ್ತಾರೆ. ಮೂರನೇ ಸ್ತರದಲ್ಲಿ ಭೂಹಿಡುವಳಿ ಹೊಂದಿದವರೆಂದರೆ ಮಾದಿಗರು, ಹೊಲೆಯರು, ವಡ್ಡರು, ಲಂಬಾಣಿಗಳು, ಕೊರಚರು ಮುಂತಾದವರು ಬರುತ್ತಾರೆ. ಕೊನೇ ಸ್ಥರದಲ್ಲಿ ಅಥವಾ ಅತ್ಯಂತ ಕೆಳಸ್ಥರದಲ್ಲಿ ಭೂಹಿಡುವಳಿ ಹೊಂದಿದವರೆಂದರೆ ಡೊಂಬರು, ಕೊರವರು ಬರುತ್ತಾರೆ ಹಿಂದಿನಿಂದಲೂ ಸರ್ಕಾರದ ಭೂಸುಧಾರಣಾ ನೀತಿ ಅನೇಕ ದೋಷಗಳಿಂದ ಕೂಡಿದುದಾಗಿ ಭೂಹಂಚಿಕೆಯಲ್ಲಿನ ಅಸಮಾನತೆಗೆ ಸರ್ಕಾರವೇ ಪ್ರಮುಖ ಕಾರಣವಾಗಿದೆ.

ಡೊಂಬರ ಕೃಷಿ ಚಟುವಟಿಕೆಗೆ ಸಂಬಂಧಿಸಿದಂತೆ ಇಂದು ಡೊಂಬರಿಗೆ ಬೇಸಾಯ ಮಾಡುವ

ಮನಸ್ಸು ಎಲ್ಲರಿಗೂ ಇದೆ, ಆದರೆ ಅದು ಸಾಧ್ಯವಾಗುತ್ತಿಲ್ಲ. ಇದಕ್ಕೆ ಪ್ರಮುಖವಾದ ಕಾರಣವೆಂದರೆ ಡೊಂಬರಿಗೆ ಭೂಮಿ ಇಲ್ಲದಿರುವುದರಿಂದ ಇತರೆ ವೃತ್ತಿಗಳಲ್ಲಿ ತೊಡಗಿದ್ದಾರೆ.

ಅಲ್ಪಸ್ವಲ್ಪ ಭೂ ಹಿಡುವಳಿ ಹೊಂದಿದವರು ಮತ್ತು ಕೃಷಿ ಚಟುವಟಿಕೆಗಳಿಗೆ ಸಂಬಂಧಪಟ್ಟಂತೆ ಇಂದು ಇಡೀ ದೇಶ ಕೃಷಿ ಸಮಸ್ಯೆಯಯನ್ನು ಎದುರಿಸುತ್ತಿದೆ. ಇಂದು ಅದಕ್ಕೆ ಹಲವಾರು ಸಮಸ್ಯೆಗಳೂ ಮುಂದೆನಿಂತಿವೆ. ಕೃಷಿಯಲ್ಲಿ ನಿರತರಾದವರು ಅಥವಾ ಕೃಷಿಯನ್ನು ನಂಬಿಕೊಂಡ ರೈತರು ಭೂಮಿಯನ್ನು ಉಳಿಮೆ ಮಾಡುತ್ತಾರೆ. ಹಾಗಾಗಿ ಮಳೆಯನ್ನೇ ನಂಬಿಕೊಂಡು ಜೀವನ ಮಾಡುತ್ತಿರುವ ಕೃಷಿಕರು ಮಳೆಯಿಂದ ಎದುರಿಸುವ ತೊಂದರೆಗಳೆಂದರೆ, ಮಳೆ ಬಂದರೆ ವಿಪರೀತ. ವರ್ಷಪೂರ್ತಿ ಮಳೆ ಬರುತ್ತದೆ. ಇದರಿಂದ ಬೆಳೆದ ಬೆಳೆಗಳು ನಾಶವಾಗುತ್ತವೆ. ಒಂದು ವರ್ಷ ಮಳೆ ಬೆಳೆ ಚೆನ್ನಾಗಿ ಆಗಿರುತ್ತದೆ. ಆ ವರ್ಷ ಮಾರುಕಟ್ಟೆಯಲ್ಲಿ ಬೆಳೆದ ಬೆಳೆಗಳಿಗೆ ಸರಿಯಾದ ಬೆಲೆ ಸಿಗುವುದಿಲ್ಲ, ಮತ್ತೆ ಹಲವು ಬಾರಿ ಮಳೆ ಬರುವುದೇ ಇಲ್ಲ ಆಗ ಕೃಷಿಕರು ಬರಗಾಲ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಹೀಗಾಗಿ ರೈತರ ಬೆಳೆಗೆ ತಂದ ಸಾಲವನ್ನು ತೀರಿಸಲಾಗದೆ ಆತ್ಮಹತ್ಯೆ ಮಾಡಿಕೊಳ್ಳುವುದು ಸಾಮಾನ್ಯ ಸಂಗತಿಯೇ ಆಗಿದೆ. ಕೃಷಿಕ ಡೊಂಬರು ಸಹ ಮೇಲಿನ ಎಲ್ಲಾ ಕೃಷಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

ಡೊಂಬರು ಅಧಿಕ ಸಂಖ್ಯೆಯಲ್ಲಿ ಭೂಹೀನರಾಗಿರುವುದಕ್ಕೆ ಹಲವಾರು ಅಂಶಗಳನ್ನು ಗುರುತಿಸಬಹುದು. ಅವುಗಳೆಂದರೆ ಇವರು ಮೂಲತಃ ಅಲೆಮಾರಿಗಳಾಗಿದ್ದವರು. ನಂತರ ನಿರಂತರ ಅಲೆಮಾರಿಗಳಾಗಿಯೇ ಮುಂದುವರೆದರು, ಸಾಮಾಜಿಕ ದಟ್ಟದಾರಿದ್ರ್ಯ ಇವರನ್ನು ಕಾಡುತ್ತಿತ್ತು. ಮೇಲುವರ್ಗದವರು ಮತ್ತು ಸ್ವಾತಂತ್ರ್ಯ ನಂತರ ಸರ್ಕಾರದ ದ್ವಿಮುಖ ನೀತಿಯಿಂದಾಗಿ ಸಿಗಬೇಕಾದವರಿಗೆ ಭೂಮಿ ಸಿಕ್ಕಲಿಲ್ಲ.

ಡೊಂಬರ ಸಮುದಾಯದಲ್ಲಿ ಬಹುಮಂದಿಗೆ ಭೂಮಿಯೇ ಇಲ್ಲ. ಬೆರಳೆಣಿಕೆಯಷ್ಟು ಕುಟುಂಬಗಳು ಮಾತ್ರ ೨ ಎಕರೆಗಿಂತಲೂ ಕಡಿಮೆ ಭೂಮಿಯನ್ನು ಹೊಂದಿವೆ. ಆರ್ಥಿಕ ಹಿಡುವಳಿ ದೃಷ್ಟಿಯಿಂದ ಈ ಮಿತಿ ಹೊಂದಿರುವ ಹಿಡುವಳಿದಾರರು ತಮ್ಮ ಕುಟುಂಬವನ್ನು ಸಾಮಾನ್ಯ ಜೀವನ ಮಟ್ಟದಲ್ಲಿಡಲು ಸಾಧ್ಯವಾಗುವುದಿಲ್ಲ. ಹೀಗಾಗಿ ಆರ್ಥಿಕ ಮತ್ತು ಸಾಮಾಜಿಕ ನ್ಯಾಯವನ್ನು ಒದಗಿಸುವುದಕ್ಕೂ ಮತ್ತು ಇವರಿಗೆ ಉದ್ಯೋಗಾವಕಾಶವನ್ನು ಹೆಚ್ಚಿಸುವುದಕ್ಕೂ ಭೂಮಿಯ ಮರುವಿತರಣೆ ಆರ್ಥಿಕ ನ್ಯಾಯದ ದೃಷ್ಟಿಯಿಂದ ಅತ್ಯವಶ್ಯವಿದೆ. ಹಳ್ಳಿಗಳಲ್ಲಿ ಬಹುಮಂದಿ ಬಡವರೂ ಮತ್ತು ಕೆಲವೇ ಮಂದಿ ಶ್ರೀಮಂತರು ಇರುವುದನ್ನೆ ಕಾಣುತ್ತೇವೆ. ಇದಕ್ಕೆ ಪ್ರಮುಖ ಕಾರಣ ಕೆಲವರು ಮಾತ್ರ ದೊಡ್ಡ ಪ್ರಮಾಣದಲ್ಲಿ ಜಮೀನನ್ನು ಹೊಂದಿದ್ದು ಬಹುಜನರು ತೀರ ಸಣ್ಣ ಹಿಡುವಳಿಗಳನ್ನೇ ಪಡೆದಿರುವುದು, ಅಥವಾ ಜಮೀನನ್ನೇ ಹೊಂದದೇ ಇರುವಂತೆ ಆಗಿದೆ. ಆದುದರಿಂದ ಆರ್ಥಿಕ ಹಾಗೂ ಸಾಮಾಜಿಕ ನ್ಯಾಯಾದ

ದೃಷ್ಟಿಯಿಂದಲಾದರೂ ಭೂಮಿಯ ಮರುವಿತರಣೆ ಆಗಲೇ ಬೇಕಾಗಿದೆ, ಯಾವುದೇ ಸಮುದಾಯದ ಸಾಮಾಜಿಕ ಸ್ಥಾನವು ಹಳ್ಳಿಗಳಲ್ಲಿ ಅದು ಪಡೆದಿರುವ ಭೂಮಿಯನ್ನ ಅವಲಂಬಿಸಿರುತ್ತದೆ. ಭೂಮಿಯಿಲ್ಲ ದವರಿಗೆ ಹಳ್ಳಿಗಳಲ್ಲಿ ಸಾಮಾನ್ಯವಾಗಿ ಗೌರವವಿರುವುದಿಲ್ಲ ಸಮಾಜದಲ್ಲಿ ಗೌರವದಿಂದ ಬದುಕಿರಲು ಸ್ವಲ್ಪವಾದರೂ ಜಮೀನು ಇರಲೇಬೇಕಾಗುತ್ತದೆ.

### ಭೂಸುಧಾರಣೆ ಮತ್ತು ಡೊಂಬರು

"ಕರ್ನಾಟಕದಲ್ಲಿ ಬೇಸಾಯಕ್ಕೆ ಸಂಬಂಧಿಸಿದ ವಿಷಯಗಳು ತುಂಬಾ ಆತಂಕ ಕಾರಿಯಾಗಿವೆ. ಆದುದರಿಂದಲೇ ಬಹಳ ಕಾಲದವರೆಗೂ ಕೃಷಿ ರಂಗದಲ್ಲಿ ತೃಪ್ತಿಕರವಾಗಿ ಪ್ರಗತಿಯಾಗಿಲ್ಲ. ಉತ್ತಮ ಪರಿಣಾಮಗಳ ಸಾಧನೆಯ ಉದ್ದೇಶದಿಂದ ಒಕ್ಕಲುತನ ರಚನೆಯ ಸಮಗ್ರ ಮಾರ್ಪಾಡಿಗೆ ಕೈಗೊಂಡ ಕ್ರಮಗಳನ್ನು ಭೂಸುಧಾರಣೆಗಳು ಎನ್ನುವರು."[೬] ಆದರೆ ಈ ಭೂಸುಧಾರಣೆಯಂತಹ ಕಾನೂನುಗಳು ನಮ್ಮ ನಾಡಿನಲ್ಲಿ ಆದಿವಾಸಿ ಅಲೆಮಾರಿ ಸಮುದಾಯಗಳಿಗೆ, ಎಷ್ಟರ ಮಟ್ಟಿಗೆ ಅನುಕೂಲರವಾಗಿವೆ ಎಂಬ ಸಂಗತಿಯನ್ನು ಗಮನಿಸಿದಾಗ ಭೂಸುಧಾರಣೆ ಕೇವಲ ಕಾನೂನಿನ ಕಸರತ್ತಾಗಿ ಮಾತ್ರ ನಿಲ್ಲುತ್ತದೆ. ಇಂತಹ ಕಾಯಿದೆಯ ಆಗಾಧವಾದ ಗುರಿ ತತ್ವಗಳು, ಸಾಮಾಜಿಕ ಮತ್ತು ಆರ್ಥಿಕ ದೃಷ್ಟಿಯಿಂದಲೂ ಭೂಸುಧಾರಣೆ ಬಹುಮುಖ್ಯವಾಗಿದೆ. ಸಮಾಜಿಕವಾಗಿ ಪ್ರತಿಯೊಬ್ಬರಿಗೂ ಬೇಸಾಯ ಕೆಲಸ ಮಾಡಲು ಸುಲಭ ಅವಕಾಶವಿರಬೇಕು ಒಂದು ವರ್ಗದ ಜನರಿಂದ ಇನ್ನೊಂದು ವರ್ಗದ ಜನರ ಶೋಷಣೆ ನಡೆಯಬಾರದು. ಸಮಾಜದಲ್ಲಿ ಪ್ರತಿಯೊಬ್ಬರಿಗೂ ಅವರವರ ದುಡಿಮೆ ಮತ್ತು ಬಂಡವಾಳ ತೊಡಗಿಸುವಿಕೆಗೆ ತಕ್ಕ ಪ್ರತಿ ಫಲ ದೊರೆಯಬೇಕಾದುದು ಆತ್ಯವಶ್ಯಕ. ಆರ್ಥಿಕವಾಗಿ ಬೇಸಾಯ ಪದ್ಧತಿಯಲ್ಲಿ ಕೆಲವೊಂದು ಮಾರ್ಪಾಡುಗಳನ್ನು ಮಾಡುವುದು ಇದರಿಂದ ಅಧಿಕ ಪ್ರಮಾಣದಲ್ಲಿ ಆಹಾರಧಾನ್ಯ ಮತ್ತು ಕಚ್ಚಾ ವಸ್ತುಗಳನ್ನು ಉತ್ಪಾದಿಸುವದು ಇವುಗಳ ಜೊತೆಗೆ ಕಷ್ಟಪಟ್ಟು ದುಡಿಯುವ ರೈತನಿಗೆ ತನ್ನ ಶ್ರಮದ ಪ್ರತಿಫಲ ತನಗೆ ದೊರಕಬೇಕಾದರೆ ಸಾಗುವಳಿ ಭೂಮಿಯ ಒಡೆತನ ಅವನದಾಗಿರಬೇಕು. ದೇಶಿ ಪದ್ಧತಿ, ಗುತ್ತಿಗೆ ಪದ್ಧತಿ, ಜೀತದ ದುಡಿಮೆ ಇವೇ ಮುಂತಾದ ಮಾರ್ಗಗಳು ರೂಢಿಯಲ್ಲಿರುವವರೆಗೆ ಭೂಸಮಸ್ಯೆ ಇತ್ಯಾರ್ಥವಾಗುವುದಿಲ್ಲ. ಆದುದರಿಂದ ಇದನ್ನು ಪರಿಹರಿಸಿ ಜಮೀನ್ದಾರ ವರ್ಗವನ್ನು ತೊಡೆದು ಹಾಕಿ ಭೂಮಿಯ ಹಕ್ಕನ್ನು ಸ್ಥಿರಪಡಿಸಬೇಕು. ಸಹಕಾರಿ ಬೇಸಾಯಕ್ಕೆ ಉತ್ತೇಜನ ನೀಡಬೇಕು. ಕರ್ನಾಟಕದಲ್ಲಿ ಪ್ರಥಮ ಭೂಸುಧಾರಣೆ ಕಾನೂನು ೧೯೬೧ ರಲ್ಲಿ ಜಾರಿಗೆ ಬಂದು ತದನಂತರ ೧೯೬೫ ಮತ್ತು ೧೯೭೩ ರಲ್ಲಿ ತಿದ್ದುಪಡಿಗೆ ಒಳಗಾಗಿ ಕೊಲಿಕಾರರಿಗೆ ಅತಿ ಸಣ್ಣ ರೈತರಿಗೆ ಅರಣ್ಯವಾಸಿಗಳಿಗೆ ಕೃಷಿಕರಿಗೆ ಆದ

ತೊಡಕು ಹೀಗಲೂ ಮುಂದುವರೆಯುತ್ತಲೇ ಇದೆ. ಅರಣ್ಯವಾಸಿಗಳನ್ನು ಒಕ್ಕಲೆಬ್ಬಿಸುತ್ತಿರುವುದು ಪ್ರತಿನಿತ್ಯ ಪತ್ರಿಕೆಗಳಲ್ಲಿ ಕಾಣುವ ಸಂಗತಿಯಾಗಿದೆ. ಇಲ್ಲಿ ಅಲೆಮಾರಿಗಳಾಗಿ ತಮ್ಮ ಜೀವನದುದ್ದಕ್ಕೂ ನೆಲೆನಿಲ್ಲದ ಅಲೆಮಾರಿಗಳಿಗೆ ಭೂಸುಧಾರಣೆಯಂಥಹ ಕಾನೂನುಗಳು ಮಾಡಿದ್ದೇನು ಇವತ್ತಿನ ದಿನಮಾನದಲ್ಲಿ ಅವರು ಒಂದೇ ಕಡೆ ನೆಲೆನಿಂತು ಜೀವನ ಆರಂಭಿಸಿದ್ದಾರೆ. ಇಂಥಹವರಿಗೆ ಭೂಸುಧಾರಣೆಗೆ ಜಮೀನ್ದಾರಿ ಪದ್ಧತಿ, ಗೇಣಿ ಪದ್ಧತಿ ಸಹಕಾರಿ ಬೇಸಾಯ ಭೂಹಿಡಿವಳಿ ಆರ್ಥಿಕ ಹಿಡುವಳಿಗಳು ಮುಂತಾದವುಗಳಿಂದ ತಿರಸ್ಕಾರಗೊಳ್ಳಲು ಅನೇಕ ಕಾರಣಗಳನ್ನು ಸೂಚಿಸಬಹುದು. ಕರ್ನಾಟಕದಲ್ಲಿ ಭೂಸುಧಾರಣೆ ಕ್ರಮಗಳು ಯಶಸ್ವಿಯಾಗಿ ಕಾರ್ಯರೂಪದಲ್ಲಿ ಬಂದಿಲ್ಲೆಂದು ಒಪ್ಪಿಕೊಳ್ಳದೆ ವಿಧಿಯಿಲ್ಲ. ತಮ್ಮ ಆಧೀನದಲ್ಲಿರುವ ಭೂಮಿಯನ್ನು ಸುಲಭವಾಗಿ ಬಿಟ್ಟುಕೊಡಲು ಶ್ರೀಮಂತ ವರ್ಗದವರು ಇಚ್ಛಿಸುವುದಿಲ್ಲ ಇದರಿಂದ ಗೇಣಿದಾರರ ಕೊಲೆ ಸುಲಿಗೆಗಳು ನೆಡೆದ ಅವ್ಯಾಹತವಾಗಿ ನಡೆಯುತ್ತಲೇ ಇವೆ. "ರಾಜಕೀಯ ಹಸ್ತಕ್ಷೇಪ ಮತ್ತು ಶ್ರೀಮಂತ ಭೂಮಾಲಿಕರ ಹಸ್ತಕ್ಷೇಪವು ಭೂಸುಧಾರಣೆಗಳ ವಿಫಲತೆಗೆ ಇನ್ನೊಂದು ಪ್ರಮುಖ ಕಾರಣವಾಗಿದೆ."[2] ಕಾನೂನುಗಳನ್ನು ಯಶಸ್ವಿಯಾಗಿ ಕಾರ್ಯರೂಪದಲ್ಲಿ ತರಲು ಈ ಪಂಗಡಗಳು ಸರ್ಕಾರದ ಮೇಲೆ ಪ್ರಭಾವ ಬೀರುತ್ತಿರುವುದರಿಂದ ಸಾಧ್ಯವಾಗುತ್ತಿಲ್ಲ. ಆದ್ದರಿಂದಲೇ ಗರಿಷ್ಟ ಮಿತಿಗಿಂತ ಹೆಚ್ಚು ಭೂಮಿಯನ್ನ ಹೊಂದಿದವರಿಂದ ಇನ್ನುವರೆಗೆ ಸರಕಾರದವರಿಗೆ ಪೂರ್ತಿಯಾಗಿ ಭೂಮಿಯನ್ನು ವಶಪಡಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಭೂ ಸುಧಾರಣೆಯ ಕಾನೂನು ಸಹ ಹೆಸರಿಸಲಾಗಿದೆ ಅದರಲ್ಲಿಯ ನಿಯಮಗಳ ಅನುಕೂಲತೆ ಪಡೆದುಕೊಂಡು ಭೂಮಾಲಿಕರು ನಕಲು ಹೆಸರುಗಳಲ್ಲಿರುವ ಜಮೀನಿನ ಶೇಖರಣೆಗೆ ತೊಡಗಿರುವ ಉದಾರಣೆಗಳು ಬಹಳ ಇವೆ, ಭೂನ್ಯಾಯ ಮಂಡಲಿಗಳಲ್ಲಿ ತಮ್ಮ ವಿರುದ್ಧ ತೀರ್ಮಾನವಾದ ಉದಾಹರಣೆಗಳನ್ನೆ ಭೂಮಾಲಿಕರು ಉಚ್ಚನ್ಯಾಯಾಲಯಗಳಿಗೆ ಒಯ್ಯುವದು ಸಾಮಾನ್ಯ ಸಂಗತಿಯಾಗಿದೆ. ಅತ್ಯಂತ ದುರಾದೃಷ್ಟದ ಸಂಗತಿಯೆಂದರೆ ಭೂಸುಧಾರಣಾ ನೀತಿಯ ಘೋಷಣೆ ಮತ್ತು ಅದರ ಕ್ರಮಬದ್ಧವಾದ ಅನುಷ್ಠಾನದ ನಡುವೆ ಅನೇಕ ವರ್ಷಗಳ ಸಂದಿದ್ದವು. ಈ ಅವಧಿಯಲ್ಲಿ ಭೂಮಾಲಿಕರು ತಮ್ಮ ಜಮೀನನ್ನು ನಕಲು ಹೆಸರುಗಳಿಗೆ ಸ್ಥಳಾಂತರಿಸಲು ಅನುಕೂಲವಾಯಿತು.

ಗೇಣಿದಾರಿಕೆ, ಹೆಚ್ಚುವರಿ ಜಮೀನಿನ ಲಭ್ಯತೆ ಮೊದಲಾದ ಸಂಗತಿಗಳಿಗೆ ಸಂಬಂಧಿಸಿದಂತೆ ದಾಖಲೆಗಳು ಮತ್ತು ನಿಖರವಾದ ಅಂಕಿಅಂಶಗಳ ಕೊರತೆಯೂ ಇದೆ. ಭೂಸುಧಾರಣೆಗಳ ವ್ಯವಸ್ಥಿತ ಅನುಷ್ಠಾನಕ್ಕೆ ಪ್ರಮುಖಕೊರತೆ ಇದಾಗಿದೆ ಎಂದರೂ ತಪ್ಪಾಗಲಾರದು. ಕೃಷಿಕ್ಷೇತ್ರದಲ್ಲಿಯೂ ದಲಿತರ ಮೇಲಾಗುವ ದೌರ್ಜನ್ಯ ದಬ್ಬಾಳಿಕೆಗಳು ಅಗಣಿತ. ಇದಕ್ಕೆ ಮುಖ್ಯ ಕಾರಣವೆಂದರೆ ಸ್ವತಃ ದಲಿತರೆ ಕೃಷಿಕರಾದರೆ ಶೋಷಿತ ವರ್ಗಗಳಿಗೆ, ಅಗ್ಗದ ಆಳುಗಳು ದೊರೆಯಲಾರರು. ಬರಿಮೈ, ಅರೆಹೊಟ್ಟೆಯಿಂದ

ದಿನವಿಡೀ ದುಡಿದು ಧನಿಗಳ ಕಣಜ ತುಂಬುವ ಕೂಲಿಗಳ ಸಂಖ್ಯೆ ಕಡಿಮೆ ಆಗುವುದೆಂಬುದೇ ಧನಿಕರ ದುಮ್ಮಾನಕ್ಕಷ್ಟಕ್ಕೆ ಕಾರಣ, ಕೂಲಿ ಆಳುಗಳೆಲ್ಲ ಕೃಷಿಕರಾದರೆ ತಮ್ಮ ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನಕ್ಕೆ ಧಕ್ಕೆ ಖಚಿತ ಎಂಬ ಭಯ ಮೇಲ್ವರ್ಗದವರನ್ನು ಕಾಡುತ್ತಿದೆ.

ಸಾಮಾಜಿಕ ಮತ್ತು ಆರ್ಥಿಕ ಸಂಬಂಧಗಳು ಕ್ರಾಂತಿಕಾರಿ ಪುನರ್‌ರಚನೆಯಿಂದ ಮಾತ್ರ ಈ ಸಮಸ್ಯೆಗಳನ್ನು ಬಗೆಹರಿಸಬಹುದು.

## ಭೂಹಿಡುವಳಿಯ ಪಟ್ಟಿ

| ಕ್ರ.ಸಂ. | ನೆಲೆಗಳು | ಕುಟುಂಬಗಳು | ಹೊಂದಿರುವ ಭೂಹಿಡುವಳಿ | | | ಭೂರಹಿತ |
|---|---|---|---|---|---|---|
| | | | ಒಣ | ನೀರಾವರಿ | ಒಟ್ಟು | ಕುಟುಂಬಗಳು |
| ೧. | ಬಳ್ಳಾರಿ | ೧ | -- | -- | -- | -- |
| ೨. | ಹೊಸಪೇಟೆ | ೩ | -- | -- | -- | -- |
| ೩. | ಕಮಲಾಪುರ | ೮ | -- | -- | -- | -- |
| ೪. | ಕೂಡ್ಲಿಗಿ | ೧೮ | ೨೮ | ೫ | ೩೩ | ೧೦ |
| ೫. | ನಾಗರಹುಣಸೆ | ೨ | ೬ | -- | -- | ೧ |
| ೬. | ದಿಬ್ಬದಹಳ್ಳಿ | ೯ | ೪೩ | ೧೪ | ೫೭ | ೩ |
| ೭. | ಸೋವೇನಹಳ್ಳಿ | ೧೨ | ೧೭ | -- | ೧೭ | ೬ |
| ೮. | ಮರಬನಹಳ್ಳಿ | ೧೧ | ೧೯ | -- | ೧೯ | ೯ |
| ೯. | ಕರ್ನಾರಹಟ್ಟಿ | ೧೯ | ೨೫ | -- | ೨೫ | ೯ |
| ೧೦. | ಸಂಡೂರು | ೧೨ | ೩೫ | -- | ೩೫ | ೮ |
| ೧೧. | ಬೂದುಗುಪ್ಪ | ೬ | ೫೪ | ೨೫ | ೭೯ | ೨ |
| | ಒಟ್ಟು | ೮೯ | ೨೨೭ | ೪೪ | ೨೭೧ | ೪೮ |

ಕ್ಷೇತ್ರಕಾರ್ಯದ ಮಾಹಿತಿ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ಡೊಂಬರು ಹೊಂದಿರುವ ಒಟ್ಟು ಭೂಮಿ ಹೀಗಿದೆ, ಒಣ ಭೂಮಿ ೨೨೭ ಎಕರೆಗಳು ಮತ್ತು ನೀರಾವರಿ ಭೂಮಿ ೪೪ ಎಕರೆಗಳು, ಒಟ್ಟು ಕೃಷಿಭೂಮಿ ೨೭೧ ಎಕರೆಗಳನ್ನು ಪ್ರಸ್ತುತ ಸಂದರ್ಭದಲ್ಲಿ ಡೊಂಬರು ಹೊಂದಿರುವ ಕೃಷಿ ಭೂಮಿಯಾಗಿದೆ. ಇದರಲ್ಲಿ ಭೂರಹಿತರ ಒಟ್ಟು ಕುಟುಂಬಗಳ ಸಂಖ್ಯೆ ೪೮ ಆಗಿದೆ.

## ವ್ಯಾಪಾರ



ಡೊಂಬರು ಚಿಕ್ಕಪುಟ್ಟ ವ್ಯಾಪಾರಗಳಲ್ಲಿ ತೊಡಗಿಕೊಂಡಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಇವರು ಶೇ. ೩ ರಷ್ಟಿದ್ದಾರೆ. ಇವರು ಮಾಡುತ್ತಿರುವ ವ್ಯಾಪಾರದ ಕಸಬುಗಳೆಂದರೆ ತರಕಾರಿ ಮಾರಾಟ ಮಾಡುತ್ತಾರೆ. ಹಾಗೂ ಹೂವಿನ ವ್ಯಾಪಾರ, ಸೋಡ ವ್ಯಾಪಾರ, ಟೈಯರ್ ಮಾರಾಟ, ಬಾಚಣಿಗೆ, ಪೌಡರ್ ಮಾರುತ್ತಾರೆ. ಇನ್ನು ಕೆಲವರು ಪಾನ್‌ಷಾಪ್ ಮಾಡಿಕೊಂಡಿದ್ದಾರೆ. ಮದುವೆ ಮುಂಜಿ ಕಾರ್ಯಗಳಿಗೆ ಅಡಿಗೆ ಮಾಡಲು ಹೋಗುತ್ತಾರೆ. ಟೈಲರಿಂಗ್ ಶಾಪ್ ಮಾಡಿಕೊಂಡವರೂ ಇದ್ದಾರೆ. ಹೀಗೆ ಹಲವಾರು ಕಸಬುಗಳಲ್ಲಿ ತೊಡಗಿಕೊಂಡಿದ್ದಾರೆ.



## ಇತರ ಕಸಬುಗಳು

ಡೊಂಬರು ಪ್ರಾಣಿಗಳನ್ನು ಸಾಕುವ ಕಸಬುನಲ್ಲಿಯೂ ತೊಡಗಿಕೊಂಡಿದ್ದಾರೆ. ಈ ಕಸುಬಿನಲ್ಲಿ ತೊಡಗಿಕೊಂಡಿರುವವರ ಸಂಖ್ಯೆ ೨ ರಷ್ಟು. ಇವರ ಪ್ರಮುಖ ಸಾಕುಪ್ರಾಣಿಗಳೆಂದರೆ ಕುರಿಸಾಕಣಿಕೆ ಮಾಡುತ್ತಾರೆ. ಈ ಸಮುದಾಯದಲ್ಲಿ ಸಾಕಿರುವ ಒಟ್ಟು ಕುರಿಗಳ ಸಂಖ್ಯೆ ೪೫೦ ಆಗಿದೆ. ಇದರ ಜೊತೆಗೆ ಮೇಕೆಗಳನ್ನು ಸಹ ಸಾಕುತ್ತಿದ್ದಾರೆ. ಹಲವರು ಎಮ್ಮೆ ಮತ್ತು ಆಕಳುಗಳನ್ನು ಸಾಕಿ ಹಾಲು ಮಾರುತ್ತಿದ್ದಾರೆ. ಹೀಗೆ ಇಂಥ ಸಣ್ಣಪುಟ್ಟ ಕಸಬುಗಳಲ್ಲಿಯೇ ತೊಡಗಿಕೊಂಡಿದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಡೊಂಬರು ಸರ್ಕಾರಿ ನೌಕರಸ್ಥ ಅಥವಾ ಉದ್ಯೋಗಸ್ಥರ ಸಂಖ್ಯೆ ೧ರಷ್ಟಿದೆ. ಇವರು ಮಾಡುತ್ತಿರುವ ಉದ್ಯೋಗಗಳೆಂದರೆ ಪೋಸ್ಟುಮ್ಯಾನ್‌ಗಳಿದ್ದಾರೆ, ಒಬ್ಬರು ಅಧ್ಯಾಪಕರು ಇದ್ದಾರೆ, ಮತ್ತೊಬ್ಬರು ಡಾಕ್ಟರರೂ ಆಗಿದ್ದಾರೆ, ಹಲವರು ಶಿಕ್ಷಕರಾಗಿದ್ದಾರೆ, ಒಬ್ಬರು ಪೋಲೀಸ್ ಇಲಾಖೆಯಲ್ಲಿ ಸೇವೆ ಮಾಡುತ್ತಿದ್ದಾರೆ, ಕರ್ನಾಟಕ ಹಾಲು ಒಕ್ಕೂಟ ಕೇಂದ್ರದ ಅಧಿಕಾರಿಯಾಗಿದ್ದಾರೆ, ಬ್ಯಾಂಕಿನಲ್ಲಿ ಗುಮಾಸ್ತರರಾಗಿ ಇದ್ದಾರೆ ಇನ್ನೊಬ್ಬರು ಅಂಗನವಾಡಿ ಶಿಕ್ಷಕರಾಗಿದ್ದಾರೆ. ಹೀಗೆ ಹಲವು ಕಸಬುಗಳಲ್ಲಿ ತೊಡಗಿಕೊಂಡಿರುವವರ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ ಇದೆ. ಹೀಗೆ ಇನ್ನೂ ಕೆಲವರು ಖಾಸಗಿ ಉದ್ಯೋಗಗಳಲ್ಲಿ ತೊಡಗಿಕೊಂಡವರೂ ಇದ್ದಾರೆ.

ಮೇಲಿನ ಯಾವ ಕಸಬುಗಳಿಗೂ ತೊಡಗಿಕೊಳ್ಳದೆ ಇತರ ಕಸಬುಗಳನ್ನು ಮಾಡುವರ ಸಂಖ್ಯೆ ಶೇ. ೮೨ ರಷ್ಟು ಇದೆ. ಇವರಲ್ಲಿ ಹೆಚ್ಚಾಗಿ ಭೂಮಾಲಿಕರ ಹೊಲಗದ್ದೆಗಳಲ್ಲಿ ಕೂಲಿ ಮಾಡುತ್ತಿದ್ದಾರೆ. ಮತ್ತೆ ಕೆಲವರು ಕಾಂಟ್ರ್ಯಾಕ್ಟರ್ ಕೈಕೆಳಗೆ ಬೇಲ್‌ದಾರ ಕೆಲಸ ಮಾಡುತ್ತಿದ್ದಾರೆ. ಹಲವರು ಬೇಲ್‌ದಾರ್‌ಗಳಿಗೆ ಸಹಾಯಕರಾಗಿ ಕೂಲಿ ಪಡೆಯುತ್ತಿದ್ದಾರೆ. ಅಭಿವೃದ್ಧಿ ಕಾಮಗಾರಿಕೆಯಡಿಯಲ್ಲಿ ಬರುವ ರಸ್ತೆ

ಡಾಂಬಾರೀಕರಣ, ದೂರವಾಣಿ ತಂತಿಯನ್ನು ನೆಲದಡಿ ಹಾಕುವುದು. ಉಸುಗು ಲೋಡ್ ಮಾಡುವ ಕೆಲಸ ಹೀಗೆ ಇಂದು ಹತ್ತು ಹಲವಾರು ಉದ್ಯೋಗಗಳಲ್ಲಿ ತೊಡಗಿಕೊಂಡಿದ್ದಾರೆ. ಇಂದಿನ ಡೊಂಬರು ಕಸಬುಗಳು ವೈವಿಧ್ಯಮಯವಾಗಿವೆ ಅವು ಯಾವೂ ನಿರ್ದಿಷ್ಟವಾಗಿಲ್ಲ ಮತ್ತು ನಿರಂತರವಾಗಿಲ್ಲ. ಇವತ್ತು ಒಂದು ಕೆಲಸ ಮರುದಿನ ಮತ್ತೊಂದು ಕೆಲಸದಲ್ಲಿ ತೊಡಗಿಕೊಳ್ಳುವುದು ಇವರಿಗೆ ಅನಿವಾರ್ಯವಾಗಿದೆ.

## ೩. ಶೈಕ್ಷಣಿಕ ಸ್ಥಾನಮಾನಗಳು

ಜೀವನದಲ್ಲಿ ಮುಂದುವರೆಯಲು ಬುದ್ಧಿಜ್ಞಾನ ತಿಳಿಯಲು ಮಹತ್ವವಾದದ್ದನ್ನು ಸಾಧಿಸಲು ಪ್ರಪಂಚವನ್ನು ತಿಳಿಯಲು ಶಿಕ್ಷಣ ಅಗತ್ಯ. ವಿದ್ಯೆ ಮನುಷ್ಯನನ್ನು ಬೆಳಕಿನ ಕಡೆಗೆ ಒಯ್ಯುತ್ತದೆ. ಯಾವುದೇ ಒಂದು ದೇಶ ಪ್ರಗತಿಪಥದತ್ತ ಸಾಗಲು ಶಿಕ್ಷಣ ಬೇಕು, ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ದೇಶದಲ್ಲಿಯೂ ಅಕ್ಷರವಂತರ ಸಂಖ್ಯೆ ತುಂಬಾ ಕಡಿಮೆ ಇದೆ. ಇದಕ್ಕೆ ಕಾರಣ ಹಲವಾರು. ಇಂದಿಗೂ ಕಾಡಿನಲ್ಲಿ ವಾಸಮಾಡುತ್ತಿರುವ ಬುಡಕಟ್ಟಿನ ಜನ, ನಾಗರೀಕತೆಯ ಜನಸಂಪರ್ಕದ ಪರಿಚಯವೇ ಇಲ್ಲದೆ, ತಮ್ಮದೇ ಲೋಕದಲ್ಲಿದ್ದಾರೆ. ಅಲೆಮಾರಿಗಳು ಸಹ ಶಿಕ್ಷಣದಿಂದ ಇನ್ನು ದೂರವೇ ನಿಂತಿದ್ದಾರೆ. ದಲಿತ ಶೂದ್ರ ಸಮುದಾಯಗಳಲ್ಲಿ ಇಂದಿಗೂ ಬಡತನ, ಹಸಿವು, ತುಂಬಿ ತುಳುಕುತ್ತಿದೆ. ಹೀಗಾಗಿ ನಮ್ಮ ದೇಶ ಸಾರ್ವಜನಿಕರಿಗೆ ಶಿಕ್ಷಣ ಕೊಡುವಲ್ಲಿ ಕುಂಟುತ್ತಾ ಸಾಗುತ್ತಲಿದೆ. ಇಂದಿಗೂ ಸರ್ಕಾರವು ಸಂಪೂರ್ಣ ಸಾಕ್ಷರರ ನಾಡನ್ನಾಗಿ ಮಾಡಲು ಒಂದನೇ ತರಗತಿಯಿಂದ ಏಳನೆಯ ತರಗತಿಯವರೆಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಜಾರಿಗೊಳಿಸಿದೆ, ಇದರಿಂದ ಮಕ್ಕಳಿಗೆ ಪಠ್ಯಪುಸ್ತಕಗಳು ಉಚಿತವಾಗಿ ಕೊಡಲಾಗುತ್ತಿದೆ. ಮಕ್ಕಳಿಗೆ ಮಧ್ಯಾಹ್ನದ ಆಹಾರವು ಸಹ ಕೊಡಲಾಗುತ್ತಿದ್ದು ಅಷ್ಟೇ ಅಲ್ಲದೆ ಪ್ರಾಥಮಿಕ ಶಿಕ್ಷಣದ ಸಲುವಾಗಿ ಸರ್ಕಾರವು ಲಕ್ಷಗಟ್ಟಲೆ ಶಿಕ್ಷಕರನ್ನು ನೇಮಕ ಮಾಡಿಕೊಂಡು ಪ್ರತಿಯೊಂದು ಹಳ್ಳಿಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆದಿದೆ, ಹೀಗೆ ಸರ್ಕಾರವು ಶಿಕ್ಷಣದ ಸಲುವಾಗಿ ಕೋಟಿಗಟ್ಟಲೆ ಹಣ ಸುರಿಯುತ್ತಲೇ ಬಂದಿದೆ. ಆದರೂ ಇನ್ನೂ ೩೮ ರಷ್ಟು ಜನರು ಅನಕ್ಷರಸ್ಥರಾಗಿಯೇ ಉಳಿದಿದ್ದಾರೆ. ಅನಕ್ಷರಸ್ಥರ ಶಿಕ್ಷಣದ ಕಡೆಗೆ ಸಹ ಗಮನಹರಿಸಿ, ವಯಸ್ಕರಿಗೆ ರಾತ್ರಿಶಾಲೆ ಹೇಳುವ ವ್ಯವಸ್ಥೆ ಮಾಡಿದೆ. ಆದರೂ ವಿದ್ಯೆ ಕಲಿಯುವ ಹಂಬಲ ಜನರಲ್ಲಿ ಇಲ್ಲದಾಗಿದೆ. ಕಾರಣ ಅಲೆಮಾರಿಗಳ ಆರ್ಥಿಕ ಸ್ಥಿತಿಯು ಅವರಿಗೆ ಇಂತಹ ಅವಕಾಶಗಳನ್ನು ಕಲ್ಪಿಸಲಾಗುತ್ತಿಲ್ಲ.

ಪ್ರಾಚೀನ ಕಾಲದಿಂದಲೂ ಶಿಕ್ಷಣವು ಸಹ ಮೇಲುವರ್ಗದವರ ಸೊತ್ತಾಗಿಯೇ ಇಂದಿನವರೆಗೂ

ಮುಂದುವರೆದುಕೊಂಡು ಬಂದಿದೆ. ಕೆಳಜಾತಿಗಳಲ್ಲಿ ಶಿಕ್ಷಣದ ಮಹತ್ವದ ಅರಿವು ಇತ್ತೀಚೆಗೆ ಮೂಡುತ್ತಿದೆ. ಈ ಪ್ರಮಾಣವು ಕೂಡ ಅತ್ಯಲ್ಪವಾಗಿದೆ. ಇದಕ್ಕೆ ಹಲವಾರು ಅಡ್ಡಿ ಆತಂಕಗಳು ಪ್ರಮುಖ ಕಾರಣಗಳಾಗಿವೆ. ತಂದೆ ತಾಯಿಗಳು ಅವಿದ್ಯಾವಂತರಿರುತ್ತಾರೆ. ಇದರಿಂದ ಅವರಿಗೆ ಶಿಕ್ಷಣದ ಮಹತ್ವ ತಿಳಿದಿರುವುದಿಲ್ಲ. ಇದಕ್ಕೂ ಮುಖ್ಯವಾಗಿ ಈ ಜನರನ್ನು ಬಡತನವೆಂಬ ಭೂತ ಕಿತ್ತು ತಿನ್ನುತ್ತಿರುತ್ತದೆ. ಇತ್ತೀಚಿಗಂತೂ ಶಿಕ್ಷಣದ ಬಗ್ಗೆ ತಾತ್ಸಾರ ಭಾವನೆ ಬೆಳೆಸಿಕೊಂಡಿದ್ದಾರೆ. ಶಿಕ್ಷಣ ಪಡೆದರೂ ನೌಕರಿ ಸಿಗುವುದಿಲ್ಲವಂತೆ ಎನ್ನುವ ಪೂರ್ವಗ್ರಹ ಸಹಜವಾಗಿಯೇ ಇವರನ್ನು ಕಾಡುತ್ತಿದೆ.

ಇನ್ನೂ ಈಗಲೂ ಅನೇಕ ಕುಟುಂಬಗಳಲ್ಲಿ ಚಿಕ್ಕಮಕ್ಕಳನ್ನು ಕೂಲಿ ದುಡಿಯಲು ಕಳುಹಿಸಿ ತಾವು ಮನೆಯಲ್ಲಿಯೇ ಸೋಮಾರಿಗಳಾಗಿ ಕಾಲ ಕಳೆಯುತ್ತಾರೆ. ಎಲ್ಲಿಯವರೆಗೆ ಶಿಕ್ಷಣ ಪಡೆಯುವುದಿಲ್ಲವೋ ಅಲ್ಲಿಯವರೆಗೆ ಮನುಷ್ಯನಿಗೆ ಅಂಟಿಕೊಂಡಿರುವ ಸಾಮಾಜಿಕ, ಆರ್ಥಿಕ, ರಾಜಕೀಯ ಶೋಷಣೆಗಳು ಹೋಗುವುದಿಲ್ಲ. ಹೊರತಾಗಿ ಇನ್ನೂ ಅಧಿಕವಾಗುತ್ತಲೆ ಸಾಗುತ್ತವೆ. ಹೀಗಾಗಿ ಡೊಂಬರು ಆರ್ಥಿಕ ರಾಜಕೀಯ ಸಾಮಾಜಿಕ ಸೌಲಭ್ಯಗಳಿಂದ ದೂರವೇ ನಿಂತಿದ್ದಾರೆ. ಇದಕ್ಕೆ ಪ್ರಮುಖವಾದ ಕಾರಣ ಅವರಲ್ಲಿ ಶಿಕ್ಷಣ ಇಲ್ಲದಿರುವುದೇ ಆಗಿದೆ. ಇಂದು ಶಿಕ್ಷಣ ಇಲ್ಲದವರು ಅನೇಕ ಮೋಸ ವಂಚನೆಗಳಿಗೆ ಸುಲಭವಾಗಿ ಒಳಗಾಗುತ್ತಿದ್ದಾರೆ. ಹಾಗೆ ಸರ್ಕಾರ ಜಾರಿಗೊಳಿಸಿರುವ ಅನೇಕ ಸೌಲಭ್ಯಗಳನ್ನು ಪಡೆಯುವಲ್ಲಿ ವಿಫಲರಾಗಿದ್ದಾರೆ. ನಾನು ಕ್ಷೇತ್ರಕಾರ್ಯಕ್ಕಾಗಿ ಹೋದ ಸಂದರ್ಭದಲ್ಲಿ ಪಡೆದ ಅನುಭವವೆಂದರೆ ಸರ್ಕಾರವು ಜಾರಿಗೊಳಿಸಿರುವ ಸೌಲಭ್ಯಗಳಾದ ವಸತಿ, ರೇಷನ್‌ಕಾರ್ಡ್, ಸಾಲಮನ್ನ ಸೌಲಭ್ಯಗಳು, ವೃದ್ಧಾಪ್ಯ, ವಿದವೆ ವೇತನ ಮುಂತಾದ ಸೌಲಭ್ಯಗಳನ್ನು ಪಡೆಯುವಲ್ಲಿ ವಿಫಲರಾಗಿದ್ದಾರೆ. ಇದಕ್ಕೆ ಕಾರಣ ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿರುವುದೇ ಆಗಿದೆ.

ಡೊಂಬರ ಸಮುದಾಯದಲ್ಲಿ ಶಿಕ್ಷಣ ಪಡೆಯಲು ಇತ್ತೀಚೆಗೆ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸುತ್ತಿದ್ದಾರೆ. ಕ್ಷೇತ್ರಕಾರ್ಯದ ಮಾಹಿತಿ ಪ್ರಕಾರ ಪ್ರಸ್ತುತ ಸಂದರ್ಭದಲ್ಲಿ ಶಿಕ್ಷಣ ಪಡೆಯುತ್ತಿರುವವರು ಮತ್ತು ಶಿಕ್ಷಣ ಪಡೆದವರು ಶಿಕ್ಷಣ ಪಡೆಯದೆ ಇರುವವರನ್ನು ದಾಖಲಿಸಲಾಗಿದೆ. ಈ ದಾಖಲಾತಿಯಂತೆ ಬಳ್ಳಾರಿ ಜಿಲ್ಲೆಯಲ್ಲಿ ಡೊಂಬರು ಒಟ್ಟು ಜನಸಂಖ್ಯೆ ೬೫೦ ಇದೆ. ಇದರಲ್ಲಿ ಪುರುಷರು ೩೩೨, ಸ್ತ್ರೀಯರು ೩೧೮, ಕುಟುಂಬಗಳ ಒಟ್ಟು ಸಂಖ್ಯೆ ೨೦೦.

ಈ ಮುಂದಿನ ಕೋಷ್ಟಕದಲ್ಲಿ ಬಳ್ಳಾರಿ ಜಿಲ್ಲೆಯಾದ್ಯಂತ ನಾನು ಮಾಡಿದ ಕ್ಷೇತ್ರಕಾರ್ಯದಿಂದ ದತ್ತವಾದ, ಡೊಂಬರ ಶೈಕ್ಷಣಿಕ ಸ್ಥಾನಮಾನದ ಅಂಕಿಅಂಶಗಳನ್ನು ನೀಡಿದ್ದೇನೆ.

## ಬಳ್ಳಾರಿ ಜಿಲ್ಲೆಯ ಡೊಂಬರ ಶೈಕ್ಷಣಿಕ ಸ್ಥಾನಮಾನ

| ಶೈಕ್ಷಣಿಕ ಸ್ಥಾನಮಾನ | ಗಂಡಸರು | ಹೆಂಗಸರು | ಒಟ್ಟು |
|---|---|---|---|
| ಅನಕ್ಷರಸ್ಥರು | ೯೨ | ೧೧೪ | ೨೦೬ |
| ಪ್ರಾಥಮಿಕ ಹಂತ | ೧೩೩ | ೯೭ | ೨೩೦ |
| ಪ್ರೌಢ ಹಂತ | ೩೮ | ೨೫ | ೬೩ |
| ಪದವಿಪೂರ್ವ | ೧೭ | ೯ | ೨೬ |
| ಪದವಿ ಶಿಕ್ಷಣ | ೬ | ೩ | ೯ |
| ಉನ್ನತ ಶಿಕ್ಷಣ | ೩ | ೩ | ೬ |

ಹಿಂದಿನ ಪಟ್ಟಿಯ ಪ್ರಕಾರ ಬಳ್ಳಾರಿ ಜಿಲ್ಲೆ ಡೊಂಬರ ಸಾಕ್ಷರರ ಸಂಖ್ಯೆಯನ್ನು ಕ್ಷೇತ್ರಾಧಾರಿತ ಖಚಿತ ಮಾಹಿತಿ ಪ್ರಕಾರ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿರುವ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ ೨೩೦ ಇದರಲ್ಲಿ ೧೩೩ ಜನ ಗಂಡಸರು ಮತ್ತು ೯೭ ಜನ ಸ್ತ್ರೀಯರು. ಹಾಗೆ ಪ್ರೌಢಶಾಲೆಯವರಿಗೆ ಓದಿದ ಮತ್ತು ಓದುತ್ತಿರುವವರ ಒಟ್ಟುಸಂಖ್ಯೆ ೬೩ ಇದೆ ಇದರಲ್ಲಿ ಪುರುಷರು ೩೮ ಸಂಖ್ಯೆಯಲ್ಲಿದ್ದಾರೆ. ಹೆಂಗಸರ ಸಂಖ್ಯೆ ೨೫ ಆಗಿದೆ. ಪದವಿಪೂರ್ವದವರೆಗೆ ಮಾತ್ರ ಓದಿದವರ ಒಟ್ಟು ಸಂಖ್ಯೆ ೨೬, ಇದರಲ್ಲಿ ಗಂಡಸರು ೬ ಮಂದಿ ಮತ್ತು ಹೆಂಗಸರು ೩ ಇದ್ದಾರೆ ಹಾಗೂ ಉನ್ನತ ಶಿಕ್ಷಣದವರೆಗೆ ಓದಿಕೊಂಡವರ ಒಟ್ಟು ಸಂಖ್ಯ ೬ ಇದರಲ್ಲಿ ಗಂಡಸರ ಸಂಖ್ಯೆ ೩ ಮತ್ತು ಹೆಂಗಸರು ೩ ಸಮವಾಗಿದ್ದಾರೆ.

ಹೀಗೆ ಶಿಕ್ಷಣ ಪಡೆದವರ ಒಟ್ಟು ಸಂಖ್ಯೆ ೩೩೪ ಅದರಲ್ಲಿ ಗಂಡಸರು ಸಾಕ್ಷರರ ಸಂಖ್ಯೆ ೧೯೭ ಆಗಿದೆ. ಮತ್ತು ಹೆಂಗಸರು ೧೩೭ ಇದ್ದಾರೆ. ಹೀಗಾಗಿ ಇದರಿಂದ ತಿಳಿದು ಬರುವುದೇನೆಂದರೆ ಬಳ್ಳಾರಿ ಜಿಲ್ಲೆಯ ಡೊಂಬರ ಸಾಕ್ಷರತೆ ಪ್ರಮಾಣ ಶೇ. ೫೦ ರಷ್ಟಿದೆ. ಇನ್ನೂ ಶೇ. ೫೦ ರಷ್ಟು ಅನಕ್ಷರಸ್ಥ ರಾಗಿಯೇ ಉಳಿದಿದ್ದಾರೆ. ಈ ಸಮುದಾಯದವರು ಪಡೆದಿರುವ ಶೈಕ್ಷಣಿಕ ಸರಾಸರಿ ಇತರೆ ಸಮುದಾಯ ಗಳೊಂದಿಗೆ ಹೋಲಿಕೆ ಮಾಡಿ ನೋಡಿದಾಗ, ಡೊಂಬರ ಸಮುದಾಯವು ಇನ್ನೂ ತೀರ ಹಿಂದುಳಿದಿದೆ ಎಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಡೊಂಬರ ಸಮುದಾಯದಲ್ಲಿ ಶಿಕ್ಷಣದ ಅರಿವು ಮೂಡಿ ಪ್ರಸ್ತುತ ಸಂದರ್ಭದಲ್ಲಿ ಮಕ್ಕಳನ್ನು ಹೆಚ್ಚಾಗಿ ಕಳುಹಿಸುತ್ತಿದ್ದಾರೆ ಎಂಬ ಅಂಶವು ಮೇಲೆ ಕೊಟ್ಟಿರುವ ಅಂಕಿಅಂಶಗಳ ಸಹಾಯದಿಂದ ತಿಳಿದು ಬರುತ್ತದೆ. ಪದವಿ ಮತ್ತು ಉನ್ನತಶಿಕ್ಷಣ ಪಡೆದವರಂತೂ

ಬೆರಳೆಣಿಕೆಯ ಸಂಖ್ಯೆಗಿಂತಲೂ ಕಡಿಮೆ ಇದ್ದಾರೆ. ಆದ್ದರಿಂದ ಡೊಂಬರ ವಿದ್ಯಾಭ್ಯಾಸದ ಪ್ರಾರಂಭ ಹಂತ ಇನ್ನೂ ಈಗ ಶುರುವಾಗಿದೆ ಎಂದು ತಿಳಿದುಬರುತ್ತದೆ.

ಇಂದಿನ ಜಾಗತೀಕರಣದಿಂದಾಗಿ ವಿಶ್ವವೇ ಚಿಕ್ಕದಾಗುತ್ತಿದರೂ, ಭಾರತದೇಶದಲ್ಲಿ ಕೆಲವು ಸಮುದಾಯಗಳು ಶಿಕ್ಷಣದಿಂದ ಇನ್ನೂ ಬಹಳ ದೂರ ನಿಂತುಕೊಂಡಿವೆ. ಶಿಕ್ಷಣದಿಂದ ಮಾನವನ ಜೀವನ ಬೆಳಕಾಗುವುದು ಶಿಕ್ಷಣವೇ ಶಕ್ತಿ, ಶಿಕ್ಷಣವು ಸರ್ವವ್ಯಾಪಿ ಎಂಬಂತೆ ಶಿಕ್ಷಣ ಇಂಥಹ ಮಹತ್ವವನ್ನ ಪಡೆದಿದೆ. ಶಿಕ್ಷಣದ ಮಹತ್ವದ ಬಗ್ಗೆ ಡೊಂಬರ ಸಮುದಾಯದ ಅನೇಕ ಕುಟುಂಬಗಳಿಗೆ ಇನ್ನೂ ತಿಳಿದಿಲ್ಲ. ಶಿಕ್ಷಣವೆಂದರೆ ಇವರ ಪ್ರಕಾರ ಕೇವಲ ಶ್ರೀಮಂತರು, ಉದ್ಯೋಗಸ್ಥರ ಮಕ್ಕಳು ಮಾತ್ರ ಓದಿಕೊಳ್ಳುತ್ತಾರೆ. ನಮ್ಮಂತ ಬಡವರು ಮಕ್ಕಳನ್ನು ಶಾಲೆಗೆ ಕಳುಹಿಸಲು ನಮ್ಮಿಂದಾಗುತ್ತಿಲ್ಲ ಅನ್ನುತ್ತಾರೆ. ಹೀಗಾಗಿ ಶಿಕ್ಷಣದಿಂದ ವಂಚಿತರಾಗಿ ಇದರಿಂದ ತಮ್ಮ ಹಕ್ಕುಗಳ ಮಹತ್ವವೇನು ಎಂಬ ಗೋಜಿಗೆ ಹೋಗುವುದೇ ಇಲ್ಲ. ಈ ಸಮುದಾಯವು ಸಂಪೂರ್ಣ ಶಿಕ್ಷಣದ ಗುರಿ ಸಾಧಿಸಬೇಕಾಗಿದೆ. ಇದಕ್ಕೆ ಸುಮಾರು ಶತಮಾನಗಳ ಕಾಲವೇ ಬೇಕಾಗುತ್ತದೆ, ಎಲ್ಲಿಯವರೆಗೆ ಬಡತನ, ಅಜ್ಞಾನ ಇರುತ್ತದೆಯೋ ಅಲ್ಲಿಯವರೆಗೆ ಈ ಸಮುದಾಯವು ಏನನ್ನೂ ಸಾಧಿಸಲು ಸಾಧ್ಯವೇ ಆಗುವುದಿಲ್ಲ.

## ಬಳ್ಳಾರಿ ಜಿಲ್ಲೆಯ ಕ್ಷೇತ್ರಕಾರ್ಯದ ವರದಿ

**ಹೊಸಪೇಟೆ ತಾಲೂಕಿನಲ್ಲಿ ಡೊಂಬರು ವಾಸಿಸುತ್ತಿರುವ ಗ್ರಾಮಗಳು**

೧. ಹೊಸಪೇಟೆ

೨. ಕಮಲಾಪುರ

ನನ್ನ ಈ ಅಧ್ಯಯನದ ಅವಧಿಯಲ್ಲಿ ಡೊಂಬರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಅವಲೋಕನ ವಿಧಾನ ಮತ್ತು ಅಂಕಿಸಂಖ್ಯೆಗಳನ್ನು ಸಂಗ್ರಹಿಸುವ ಮೂಲಕ ಮತ್ತು ಆ ಭಾಗದಲ್ಲಿ ಅನುಭವವುಳ್ಳ ಡೊಂಬರ ವ್ಯಕ್ತಿಗಳೊಡನೆ ಸಂದರ್ಶನ ಮಾಡುವ ಮೂಲಕ ಪ್ರಸ್ತುತ ಪ್ರಬಂಧಕ್ಕೆ ಉತ್ತಮ ಮಾಹಿತಿಯನ್ನು ಕ್ರೂಢೀಕರಿಸುವಲ್ಲಿ ಎಲ್ಲ ಪ್ರಯತ್ನಗಳನ್ನು ಮಾಡಿದ್ದೇನೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಕೂಡ್ಲಿಗಿ, ಸಿರುಗುಪ್ಪ, ಸಂಡೂರು ತಾಲೂಕುಗಳಲ್ಲಿರುವ ಡೊಂಬರ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಇಲ್ಲಿ ಪ್ರಯತ್ನಿಸಿದ್ದೇನೆ. ಒಂದು ಪ್ರಶ್ನಾವಳಿಯನ್ನು ರೂಪಿಸಿಕೊಂಡು ಬಳ್ಳಾರಿ ಜಿಲ್ಲೆಯಲ್ಲಿ ಡೊಂಬರು ವಾಸಿಸುವ ಎಲ್ಲಾ ಊರುಗಳಿಗೂ ಹೋಗಿ ಅಂಕಿಅಂಶಗಳನ್ನು ಕಲೆ ಹಾಕಿದ್ದೇನೆ. ಪ್ರತಿ ಊರುಗಳಲ್ಲೂ ಸದರಿ ಸಮುದಾಯದ

ಜನರ ಜೊತೆ ಅವರ ಸ್ಥಿತಿಗತಿಗಳ ಕುರಿತು ಚರ್ಚಿಸಿದ್ದೇನೆ. ಈ ಚರ್ಚೆಯ ಸಂದರ್ಭದಲ್ಲಿ ನನ್ನ ಗಮನಕ್ಕೆ ಬಂದ ಸಂಗತಿಗಳನ್ನು ಇಲ್ಲಿ ದಾಖಲಿಸಿದ್ದೇನೆ.

೧. ಹೊಸಪೇಟೆ

ಹೊಸಪೇಟೆ ತಾಲೂಕಿನಲ್ಲಿ ಡೊಂಬರು ಹೊಸಪೇಟೆ ಮತ್ತು ಕಮಲಾಪುರಗಳಲ್ಲಿ ವಾಸಿಸುತ್ತಿದ್ದಾರೆ. ಇಲ್ಲಿನ ಕುಟುಂಬಗಳ ಸಂಖ್ಯೆ ೩. ಗಂಡಸರು ೧೦, ಹೆಂಗಸರು ೮ ಇದ್ದು, ಒಟ್ಟು ಜನಸಂಖ್ಯೆ ೧೮ ಇರುತ್ತದೆ. ಒಂದು ಕುಟುಂಬದವರು ಸಾಮಾಜಿಕ ಕೀಳರಿಮೆಯ ಕಾರಣಗಳಿಗಾಗಿ ಇವರು ಡೊಂಬರಾಗಿದ್ದರೂ, ನಾನು ಕ್ಷೇತ್ರಕಾರ್ಯ ಮಾಡುವ ಸಂದರ್ಭದಲ್ಲಿ ಯಾವುದೇ ಮಾಹಿತಿಯನ್ನು ನೀಡಲು ನಿರಾಕರಿಸಿದರು. ಕೆಲವರು ತಮ್ಮ ಆರ್ಥಿಕ ಸ್ವಾವಲಂಬನೆಗಾಗಿ ಗ್ಯಾರೇಜುಗಳನ್ನು ತಾವೇ ನಡೆಸಿಕೊಂಡು ಹೋಗುವುದರ ಮೂಲಕ ಆ ಗ್ಯಾರೇಜಿನಲ್ಲಿ ತಾವೇ ಶ್ರಮವಹಿಸಿ ಕೆಲಸ ಮಾಡುತ್ತಿದ್ದಾರೆ. ಇನ್ನು ಹಲವರು ಇತರೆ ಗ್ಯಾರೇಜುಗಳಲ್ಲಿ ಕೂಲಿಗಾಗಿ ದುಡಿಯುತ್ತಿದ್ದಾರೆ. ಮತ್ತು ಹಲವಾರು ಖಾಸಗಿ ಕಂಪನಿಗಳಲ್ಲಿ ದಿನಗೂಲಿಗಳಾಗಿ ಸೇರಿಕೊಂಡಿದ್ದಾರೆ. ಹಾಗೆ, ಖಾಸಗಿಯ ಕಾರು ಬಸ್ಸು, ಲಾರಿ ಚಾಲಕರಾಗಿ ತಮ್ಮ ಜೀವನ ನಿರ್ವಹಿಸುತ್ತಿದ್ದಾರೆ.

೨. ಕಮಲಾಪುರ

ಹೊಸಪೇಟೆ ತಾಲೂಕಿನ ಕಮಲಾಪುರ ಗ್ರಾಮದಲ್ಲಿ ಒಟ್ಟು ಕುಟುಂಬಗಳ ಸಂಖ್ಯೆ ೮, ಗಂಡಸರು ೧೮ ಮತ್ತು ಹೆಂಗಸರು ೨೦ ಇದ್ದು, ಒಟ್ಟು ಜನಸಂಖ್ಯೆ ೩೮ ಇರುತ್ತದೆ. ಕಮಲಾಪುರದಲ್ಲಿಯ ಡೊಂಬರು ಬಹಳಷ್ಟು ಜನ ಇತರೆ ಸಾಹುಕಾರರ ಹೊಲಗದ್ದೆಗಳಲ್ಲಿ ಕೂಲಿಗಳಾಗಿ ದುಡಿಯುತ್ತಿದ್ದಾರೆ. ಇಡೀ ವರ್ಷಪೂರ್ತಿ ಕೆಲಸ ಇವರಿಗೆ ಸಿಗುವುದಿಲ್ಲ. ನಾಟಿ ಹಾಕುವ ಸಂದರ್ಭದಲ್ಲಿ ಎರಡು ತಿಂಗಳು ಮತ್ತು ಸುಗ್ಗಿಯ ಕಾಲದಲ್ಲಿ ೪೫ ದಿನಗಳು ಮಾತ್ರ ಕೆಲಸ ಸಿಗುತ್ತದೆ. ಉಳಿದ ಆರು ತಿಂಗಳು ಕೆಲಸ ವಿಲ್ಲದೆ ಕೊಡಬೇಕಾಗುತ್ತದೆ ಎಂದು ಇಲ್ಲಿಯವರು ಹೇಳುತ್ತಾರೆ. ಮತ್ತೆ ಕೆಲವರು ಟೈಲರಿಂಗ್, ಅಡಿಗೆ ಮುಂತಾದ ಕೆಲಸಗಳನ್ನು ಮಾಡುತ್ತಾರೆ. ಇಲ್ಲಿಯ ಡೊಂಬರು ಹೇಳುವ ಪ್ರಕಾರ, ನಮಗೆ ಇದುವರೆಗೂ ಸರಕಾರದ ಯಾವ ಸೌಲಭ್ಯಗಳು ದೊರಕಿಲ್ಲ. ಕೆಲವರಿಗೆ, ವಾಸಮಾಡುವುದಕ್ಕೆ ಮನೆಯಿಲ್ಲ, ಭೂಮಿಯಿಲ್ಲ, ಸರ್ಕಾರಿ ಸಾಲಸೌಲಭ್ಯಗಳು ಸಹ ದೊರಕಿಲ್ಲ. ಜೊತೆಗೆ ವಿಧವಾ, ವೃದ್ಧಾಪ್ಯ, ವೇತನ ಹಿಂದೆ ದೇವದಾಸಿ ರಾದವರಿಗೆ ಸಹ ಯಾವುದೇ ಸೌಲಭ್ಯಗಳು ಸರಕಾರ ಕಲ್ಪಿಸಿಕೊಟ್ಟಿಲ್ಲ ಎಂಬುದಾಗಿ ಹೇಳುತ್ತಾರೆ.

ಕಮಲಾಪುರದಲ್ಲಿಯ ಡೊಂಬರು ಈಶ್ವರನ ಆರಾಧಕರಾಗಿದ್ದಾರೆ. ಐದು ವರ್ಷಕ್ಕೊಮ್ಮೆ ಈಶ್ವರನ ಉತ್ಸವವನ್ನು ತಾಳಮೇಳ, ಡೋಲು, ತಮಟೆ ಮುಂತಾದ ವಾದ್ಯಗಳನ್ನು ಬಳಸಿಕೊಂಡು, ಸಮೀಪದಲ್ಲಿರುವ ಹೊಳೆಗೆ ಹೋಗಿ, ಹೋಮ ಮಾಡುತ್ತಾರೆ. ಬಳಿಕ ಪೂಜಾ ಕಾರ್ಯಕ್ರಮ ನಡೆಯುತ್ತದೆ. ಅಲ್ಲಿಂದ

ಈಶ್ವರನನ್ನು ಮನೆಗೆ ಬರುಮಾಡಿಕೊಳ್ಳುತ್ತಾರಂತೆ. ಪ್ರತಿ ಶಿವರಾತ್ರಿ ಸಂದರ್ಭದಲ್ಲಿ ಡೊಂಬರ ಸಮುದಾಯದ ಪ್ರತಿ ಮನೆಗಳಲ್ಲಿ ಸಿಹಿ ತಿನಿಸುಗಳನ್ನು ಮಾಡುತ್ತಾರೆ. ಇಡೀ ರಾತ್ರಿ ಎಲ್ಲರೂ ಒಂದು ಮನೆಯಲ್ಲಿ ಸೇರಿ ಭಜನೆ ಕಾರ್ಯಕ್ರಮ ಮಾಡುತ್ತಾರೆ. ನೀವು ಈಶ್ವರನನ್ನೇ ಮನೆದೇವರನ್ನಾಗಿ ಮಾಡಿಕೊಳ್ಳುವುದಕ್ಕೆ ಏನಾದರೂ ಹಿನ್ನೆಲೆ ಇದೆಯೆಂದು ಪ್ರಶ್ನೆ ಮಾಡಿದರೆ, ಇದಕ್ಕೆ ಹಿಂದಕ್ಕೆ ನಮ್ಮ ಅಜ್ಜನ ತಾತನ ತಂದೆಗೆ ಹೊಳೆಯಲ್ಲಿ ಜೋಳಿಗೆ ಸಿಕ್ಕಿತ್ತಂತೆ ಆ ಜೋಳಿಗೆಯಲ್ಲಿ ಈಶ್ವರನಿಗೆ ಸಂಬಂಧಿಸಿದ ಎಲ್ಲಾ ವಸ್ತುಗಳು ಮತ್ತು ಪೂಜೆಗೆ ಬೇಕಾದ ಸಾಮಾನು ಇದ್ದುದರಿಂದ ಈಶ್ವರನೇ ನಮ್ಮ ಮನೆಗೆ ಬಂದನೆಂದು ನಮ್ಮ ತಾತನವರು ಈಶ್ವರನನ್ನೇ ಮನೆದೇವರನ್ನಾಗಿ ಮಾಡಿಕೊಂಡಿದ್ದಾರೆ. ಅದರಂತೆ ಈಗ ನಾವು ಮಾಡುತ್ತೇವೆ. ಜೊತೆ ಇತರೆ ದೇವರುಗಳಾದ ಯಲ್ಲಮ್ಮ, ರಾಘವೇಂದ್ರ, ಪಂಪಾಪತಿ ಮುಂತಾದ ದೇವರುಗಳನ್ನು ಪೂಜಿಸುತ್ತಾರೆ. ಡೊಂಬರ ಸಮುದಾಯದಲ್ಲಿನ ದೇವದಾಸಿ ಪದ್ಧತಿಯನ್ನು ಈಗ ಸಂಪೂರ್ಣವಾಗಿ ಕೈಬಿಟ್ಟಿದ್ದಾರೆ. ಹಿಂದಕ್ಕೆ ನಮ್ಮ ಅಜ್ಜಿ, ನಮ್ಮ ತಾಯಿಯವರು ಸಹ ದೇವದಾಸಿಯರು ಆಗಿದ್ದರು. ನಾವು ವಿದ್ಯಾವಂತರಾಗಿ, ನಮಗೆ ಸಮಾಜದಲ್ಲಿ ದೇವದಾಸಿ ಪದ್ಧತಿ ಒಂದು ಅನಿಷ್ಟವಾದದ್ದು ಮತ್ತು ಶೋಷಣೆಯ ಸಂಕೇತವೆಂಬ ತಿಳುವಳಿಕೆ ಬಂದಾಗಿನಿಂದ ನಮ್ಮ ಪೀಳಿಗೆಯಲ್ಲಿ ಈ ಪದ್ಧತಿಯನ್ನು ಹೋಗಲಾಡಿಸಿದ್ದೇವೆ ಎನ್ನುತ್ತಾರೆ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಯಾವ ಯುವ ಪೀಳಿಗೆಯ ಮಹಿಳೆಯೂ ಸಹ ದೇವದಾಸಿಯಾದ ಪ್ರಸಂಗಗಳನ್ನು ಕೇಳಲಿಲ್ಲ. ಆದರೆ ಈ ಹಿಂದೆ, ಅಂದರೆ ಸುಮಾರು ೬೫ ವರ್ಷ ವಯಸ್ಸಿನ ಇಬ್ಬರು ಮುದುಕಿಯರು ದೇವದಾಸಿಗಳಾಗಿರುವುದನ್ನು ನಾನು ಗಮನಿಸಿ ದಾಖಲಿಸಿ ಕೊಂಡಿದ್ದೇನೆ.

ಸಂಪ್ರದಾಯ ಆಚರಣೆಗೆ ಸಂಬಂಧಿಸಿದಂತೆ, ಕಮಲಾಪುರದಲ್ಲಿಯ ಡೊಂಬರು ಮತ್ತು ದಿಬ್ಬದಹಳ್ಳಿ, ಮರಬನಹಳ್ಳಿ, ಕರ್ನಾರೆಟ್ಟಿಯಲ್ಲಿನ ಡೊಂಬರು ಪ್ರತಿ ಯುಗಾದಿಗೆ ನಾಯಕರೊಡನೆ ಜೊತೆಗೂಡಿ, ಬೇಟೆಗಾಗಿ ಹೊರಡುತ್ತಾರೆ. ಆದರೆ, ಬೇಟೆಗಾಗಿ ಹೋಗಲೇಬೇಕು ಎಂಬ ಕಡ್ಡಾಯವೇನಿಲ್ಲ. ಪ್ರತಿವರ್ಷ ಯುಗಾದಿ ಬೇಟೆಯ ದಿನ ಅವರು ನಮ್ಮನ್ನು ಕರೆಯುತ್ತಾರೆ. ನಾವು ಹೋಗುತ್ತೇವೆ. ಇತರೆ ಸಾಮಾನ್ಯ ದಿನಗಳಲ್ಲಿ, ಯಾರು ಬೇಟೆಗಾಗಿ ಹೋಗುವುದಿಲ್ಲ. ಬೇಟೆಯನ್ನು ಹೊಡೆದುಕೊಂಡು ಬಂದರೆ, ಅದರಲ್ಲಿ ನಮಗೆ ಸಹಪಾಲು ಹಂಚುತ್ತಾರೆ. ಯಾವ ತಕರಾರು ಮಾಡುವುದಿಲ್ಲ. ಆದರೆ, ಇತ್ತೀಚಿನ ದಿನಗಳಲ್ಲಿ ಬೇಟೆಗಾಗಿ ಹೋಗುವವರ ಸಂಖ್ಯೆ ಬಹಳಷ್ಟು ಕಡಿಮೆಯಾಗಿದೆ ಎನ್ನುತ್ತಾರೆ.

ಕಮಲಾಪುರ ಗ್ರಾಮದಲ್ಲಿ ಡೊಂಬರ ಸಮುದಾಯದಲ್ಲಿ ಇತ್ತೀಚೆಗೆ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದಾರೆ. ಇಲ್ಲಿ ದೇವದಾಸಿ ಪದ್ಧತಿಯನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದಾರೆ. ಹಾಗೂ ಸಾಮಾಜಿಕವಾಗಿ ಇತರೆ ಸಮುದಾಯಗಳೊಂದಿಗೆ ಹೊಂದಿಕೊಂಡು ಸ್ಪರ್ಶರಂತೆ ಗುರುತಿಸಿಕೊಂಡಿದ್ದಾರೆ.

ಕೂಡ್ಲಿಗಿ ತಾಲೂಕಿನಲ್ಲಿ ಡೊಂಬರು ವಾಸಿಸುತ್ತಿರುವ ಗ್ರಾಮಗಳು

೧. ಕೂಡ್ಲಿಗಿ

೨. ದಿಬ್ಬದಹಳ್ಳಿ

೩. ನಾಗರಹುಣಸೆ

೪. ಕರ್ನಾರಹಟ್ಟಿ

೫. ಮರಬನಹಳ್ಳಿ

ಕೂಡ್ಲಿಗಿ ತಾಲೂಕು ಜೊತೆಗೆ ಇಲ್ಲಿ ಸುತ್ತಲಿನ ಹಳ್ಳಿಯಲ್ಲಿ ವಾಸಮಾಡುವ ಡೊಂಬರ ಜೀವನ ಚಿತ್ರಣ ಬದುಕುವ ರೀತಿ, ಎದುರಿಸುತ್ತಿರುವ ಸಮಸ್ಯೆಗಳು ಆರ್ಥಿಕ, ಸಾಮಾಜಿಕ ಬದುಕು ಈ ಮೇಲಿನ ಎಲ್ಲಾ ಸಂಗತಿಗಳನ್ನ ನೇರ ಸಂದರ್ಶನ ಅವಲೋಕನ ಮತ್ತು ಅವರೊಡನೆ ಚರ್ಚಿಸುವುದರ, ಮೂಲಕ ಪಡೆದ ಕೆಲವು ಪ್ರತ್ಯಕ್ಷ ಅನುಭವಗಳನ್ನು ತಮ್ಮ ಮುಂದಿಡುತ್ತಿದ್ದೇನೆ.

೧. ಕೂಡ್ಲಿಗಿ

ಕೂಡ್ಲಿಗಿ ತಾಲೂಕಿನಲ್ಲಿ ಡೊಂಬರು ಹೊಸಪೇಟೆ ಮತ್ತು ಕಮಲಾಪುರಗಳಲ್ಲಿ ವಾಸಿಸುತ್ತಿದ್ದಾರೆ. ಇಲ್ಲಿನ ಕುಟುಂಬಗಳ ಸಂಖ್ಯೆ ೧೮, ಗಂಡಸರು ೫೫ ಮತ್ತು ಹೆಂಗಸರು ೬೧ ಇದ್ದು, ಒಟ್ಟು ಜನಸಂಖ್ಯೆ ೧೨೧ ಇರುತ್ತದೆ. ಅತಿ ಹೆಚ್ಚಿನ ಕೂಡ್ಲಿಗಿ ನಗರದಲ್ಲಿ ವಾಸಮಾಡುವ ಡೊಂಬರು ಆರ್ಥಿಕ ಅಂಶಗಳಿಗೆ ಸಂಬಂಧಿಸಿದಂತೆ ಕೆಲವು ಚಿಕ್ಕಪುಟ್ಟ ವ್ಯಾಪಾರಗಳಾದ ತರಕಾರಿ ವ್ಯಾಪಾರ ಮಾಡುತ್ತಾರೆ. ಪಾನ್‌ಷಾಪ್ ಅಂಗಡಿಗಳನ್ನು ತೆರೆದಿದ್ದಾರೆ. ಮತ್ತೆ ಕೆಲವರು ಪೋಸ್ಟ್‌ಆಫೀಸ್‌ನಲ್ಲಿ ಪೋಸ್ಟ್‌ಮ್ಯಾನ್ ಆಗಿದ್ದಾರೆ. ಎರಡನೆಯ ದರ್ಜೆಯ ಗುಮಾಸ್ತರಿದ್ದಾರೆ. ಹೀಗೆ ಶಿಕ್ಷಕರು, ಒಬ್ಬರು ಕೆ.ಎಸ್.ಆರ್.ಟಿ.ಸಿ. ಡಿಪೋನಲ್ಲಿ ಹೆಡ್ ಮೆಕಾನಿಕ್ ಆಗಿದ್ದಾರೆ. ಮತ್ತೊಬ್ಬರೂ ಡ್ರೈವರ್ ಆಗಿ ನಿವೃತ್ತಿ ಹೊಂದಿದ್ದಾರೆ. ಎರಡು, ಅಥವಾ ಮೂರು ಕುಟುಂಬಗಳು ೫ ಒಳಗಡೆ ಭೂಮಿಯನ್ನು ಹೊಂದಿದ್ದಾರೆ. ಇವರು ಬೇಸಾಯ ಮಾಡುತ್ತಾರೆ. ಇಬ್ಬರು ಮಹಿಳಾ ಕಲಾವಿದರಿದ್ದಾರೆ. ಇವರು ಸುಮಾರು ಮೂರುನೂರಕ್ಕೂ ಅಧಿಕ ಬೈಲಾಟಗಳಲ್ಲಿ ಪಾತ್ರ ಮಾಡಿದ್ದಾರೆ. ಬೈಲಾಟದಲ್ಲಿ ಸೀತೆ, ದ್ರೌಪದಿ, ಭಾನುಮತಿ, ರತಿ, ಕಮಲಾಗಾಂಧಿ ಹೀಗೆ ಅದರಲ್ಲಿ ಬರುವ ಎಲ್ಲಾ ಪಾತ್ರಗಳನ್ನು ನಿರ್ವಹಿಸಿಕೊಂಡು ಹೋಗುತ್ತೇವೆ ಎನ್ನುತ್ತಾರೆ. ಅಧಿಕ ಸಂಖ್ಯೆಯಲ್ಲಿ ಬಹುಮಾನಗಳು ಸಹ ಲಭಿಸಿವೆಯಂತೆ. ಮೇಲಿನ ಯಾವ ವೃತ್ತಿ ಮಾಡಿದ ಹಲವು ಕುಟುಂಬಗಳು, ಭೂಮಾಲಿಕರ ಬಳಿ, ಕೂಲಿ ಕೆಲಸಕ್ಕೆ ಹೋಗುತ್ತಿದ್ದಾರೆ. ಇತ್ತೀಚೆಗೆ ಪ್ರತಿಯೊಬ್ಬರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದಾರೆ. ಇತ್ತೀಚೆಗೆ ಪ್ರತಿಯೊಬ್ಬರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದಾರೆ.

ಕೂಡ್ಲಿಗಿಯಲ್ಲಿ ಡೊಂಬರ ಒಬ್ಬ ಹುಡುಗ ಎಂ.ಎ., ಎಂ.ಫಿಲ್. ಮುಗಿಸಿ ಈಗ ಪಿಎಚ್.ಡಿ ಅಧ್ಯಯನ ಕೈಗೊಂಡಿದ್ದಾನೆ. ಹಾಗೆ, ಒಬ್ಬ ಹುಡುಗಿ ಎಂ.ಎ ಓದಿ ಜೊತೆಗೆ ಎಂ.ಫಿಲ್‌ನ್ನು ಕನ್ನಡ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಿದ್ದಾಳೆ. ಇದು ಕೂಡ್ಲಿಗಿಯಲ್ಲಿ ವಾಸಮಾಡುವ ಜನರ ಜೀವನ ಚಿತ್ರಣವಾಗಿದೆ. ಇವರು ಸ್ವಲ್ಪ ಇದ್ದುದರಲ್ಲಿ ತಮ್ಮ ಜೀವನ ನಿರ್ವಹಿಸಿಕೊಳ್ಳುವಷ್ಟು ಬದುಕು ಕಂಡುಕೊಂಡಿದ್ದಾರೆ. ಮತ್ತೆ ಹಲವರು, ಸರಕಾರಿ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ.

ಸಾಮಾಜಿಕವಾಗಿ ಕೂಡ್ಲಿಗಿಯಲ್ಲಿನ ಜನ ತಮ್ಮ ಹಿಂಜರಿಕೆಗಳನ್ನು ಬಿಟ್ಟು ಉಳಿದ ಸಮುದಾಯಗಳ ಜೊತೆ ಒಳ್ಳೆಯ ಒಡನಾಟಗಳನ್ನಿಟ್ಟುಕೊಂಡಿದ್ದಾರೆ. ಬೇಡರ ಜೊತೆ ಇವರ ಸಾಮಾಜಿಕ ಸಂಬಂಧ ಚೆನ್ನಾಗಿಯೇ ಇದೆ. ಉಳಿದಂತೆ ಇಲ್ಲಿನ ಮೇಲ್ಜಾತಿಗಳು ಡೊಂಬರನ್ನು ಚೆನ್ನಾಗಿಯೇ ನಡೆಸಿಕೊಳ್ಳುತ್ತಿದ್ದಾರೆ. ಆದರೂ ಡೊಂಬರ ಮನೆಗಳು ಊರ ಅಂಚಿನಲ್ಲಿಯೇ ಇವೆ. ಈ ಹಿಂದೆ ಇಲ್ಲಿ ದೇವದಾಸಿ ಪದ್ಧತಿ ಇದ್ದರೂ ಸಹ, ಈಗ ಆ ಪದ್ಧತಿಯನ್ನು ಕೈಬಿಡಲಾಗುತ್ತಿದೆ. ಅಲ್ಲದೆ ಇಲ್ಲಿನ ಕೆಲವರು ಸರ್ಕಾರಿ ನೌಕರಿಗಳಲ್ಲಿರುವುದರಿಂದ ಸಹಜವಾಗಿಯೇ ತಮ್ಮ ಸಾಮಾಜಿಕ ಸ್ಥಾನಮಾನಗಳನ್ನು ಉತ್ತಮಪಡಿಸಿ ಕೊಂಡಿದ್ದಾರೆ.

ಆದರೆ ಆರ್ಥಿಕವಾಗಿ ಕೂಡ್ಲಿಗಿಯ ಡೊಂಬರು ತುಂಬಾ ಹಿಂದುಳಿದಿದ್ದಾರೆ. ಬಹಳ ಜನ ಭೂಹೀನರಿದ್ದಾರೆ. ಚಿಕ್ಕಪುಟ್ಟ ವ್ಯಾಪಾರಗಳನ್ನು ಮಾಡುತ್ತಿದ್ದರೂ ಆರ್ಥಿಕವಾಗಿ ಇವರು ಹೇಳಿಕೊಳ್ಳುವಂತಹ ಸ್ಥಿತಿಯಲ್ಲೇನು ಇಲ್ಲ.

## ೨. ದಿಬ್ಬದಹಳ್ಳಿ

ದಿಬ್ಬದಹಳ್ಳಿಯಲ್ಲಿ ಡೊಂಬರ ೧೩ ಮನೆಗಳು ಇವೆ ಇಲ್ಲ ವಾಸ ಮಾಡುವ ಪ್ರತಿಯೊಬ್ಬ. ಡೊಂಬರ ಕುಟುಂಬದವರು ಮಾಳಿಗೆ ಮನೆಯಲ್ಲಿ ವಾಸ ಮಾಡುತ್ತಾರೆ. ಆ ಊರಿನಲ್ಲಿ ವಾಸ ಮಾಡುವ ಸುಮಾರು ಎಂಟು ಕುಟುಂಬದವರಿಗೆ, ೪, ೫, ಎಕರೆಯವರೆಗೆ, ಭೂಮಿ ಇದೆ. ಅವರೆಲ್ಲಾ ಎತ್ತುಗಳನ್ನು ಕಟ್ಟಿ ಬೇಸಾಯ ಮಾಡುತ್ತಾರೆ. ಅದರಂತೆ ಸೋವೇನಹಳ್ಳಿಯಲ್ಲಿ ಸಹ ಸ್ವಲ್ಪಮಟ್ಟಿಗೆ ಸುಧಾರಿಸಿದ್ದಾರೆ. ಅಲ್ಲದೆ, ಆಕಳು, ಎಮ್ಮೆಗಳನ್ನು ಸಾಕುತ್ತಿದ್ದಾರೆ. ಸೋವೇನಹಳ್ಳಿ ಎರಡು ಅಥವಾ ಮೂರು ಕುಟುಂಬದವರಿಗೆ, ಮಾತ್ರ ವಾಸಮಾಡಲು ವಸತಿ ಮನೆಯ ಸಮಸ್ಯೆಯಿದೆ. ಮೂರು ಕುಟುಂಬದವರು ಗುಡಿಸಲುಗಳನ್ನು ಕಟ್ಟಿಕೊಂಡು ವಾಸ ಮಾಡುತ್ತಿದ್ದಾರೆ. ಅಲ್ಲಿ ವಾಸಮಾಡುವ ಡೊಂಬರು ಇತರ ವರ್ಗದವರೊಡನೆ ಪೈಪೋಟಿಯಂತೆ, ಕಷ್ಟಪಟ್ಟು ದುಡಿಮೆ ಮಾಡುವ ಮನೋವೃತ್ತಿಯನ್ನು ಬೆಳೆಸಿಕೊಂಡಿದ್ದಾರೆ. ದಿಬ್ಬದಹಳ್ಳಿಯಲ್ಲಿನ ಈ ಸಮುದಾಯದ ಒಬ್ಬರು ಗುಲಬರ್ಗಾದಲ್ಲಿ ಕೆ.ಎಂ.ಎಫ್‌ನಲ್ಲಿ ಅಧಿಕಾರಿಯಾಗಿದ್ದಾರೆ. ಮತ್ತೊಬ್ಬರು ರಿಜರ್ವ್ ಬ್ಯಾಂಕಿನಲ್ಲಿ ಫೀಲ್ಡ್ ಆಫೀಸರ್ ಆಗಿದ್ದಾರೆ. ಇವರು ಮಧ್ಯಪ್ರದೇಶದಲ್ಲಿದ್ದಾರೆ.

ಇನ್ನೊಬ್ಬರು ತುಮಕೂರು ನವೋದಯ ಶಾಲೆಯಲ್ಲಿ ಶಿಕ್ಷಕರಾಗಿದ್ದಾರೆ. ಒಬ್ಬರು ಎಂ.ಎ. ಪದವಿಯನ್ನು ಮುಗಿಸಿ. ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಆ ಊರನಲ್ಲಿ ಇಡೀ ಊರಿನ ಜನಕ್ಕೆ ಡೊಂಬರದೇ ಒಂದು ಹಿಟ್ಟಿನ ಗಿರಣಿ ಇದೆ. ಹಾಗೆ ಇವರಲ್ಲಿ ಎಲ್ಲಾರೂ ಅಲ್ಪಸ್ವಲ್ಪ ಓದು ಬಲ್ಲವರು ಇದ್ದಾರೆ. ಈಗ ಪ್ರತಿಯೊಬ್ಬರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದಾರೆ. ದಿಬ್ಬದಹಳ್ಳಿಯಲ್ಲಿ ಒಂದು ಕುಟುಂಬಕ್ಕೆ ೧೨ ಎಕರೆ ಒಣ ಬೇಸಾಯದ ಭೂಮಿ ಅದರಲ್ಲಿ ೩ ಎಕರೆ, ಪಂಪ್‌ಸೆಟ್‌ನ ನೀರು ಬಳಕೆ ಮಾಡುತ್ತಾರೆ.

## ೩. ನಾಗರಹುಣಸೆ

ನಾಗರಹಣಸೆಯಲ್ಲಿ ಡೊಂಬರ ಸಮುದಾಯದ ಎರಡು ಕುಟುಂಬಗಳಿವೆ. ಇಲ್ಲಿ ಗಂಡಸರು ಮೂವರು ಮತ್ತು ಹೆಂಗಸರು ಐದು ಒಟ್ಟು ಏಳು ಜನ ಇದ್ದಾರೆ. ಇದರಲ್ಲಿ ಒಂದು ಕುಟುಂಬ ಸರ್ಕಾರಿ ನೌಕರಿಯಲ್ಲಿದ್ದು, ಮತ್ತೊಂದು ಕುಟುಂಬ ಕೃಷಿಬೇಸಾಯ ಮಾಡುತ್ತಾರೆ. ಇವರು ಎರಡು ಕುಟುಂಬಗಳು ಮನೆಮಾಳಿಗೆಯನ್ನು ಹೊಂದಿವೆ. ಸಾಮಾಜಿಕವಾಗಿ ಇತರೆ ವರ್ಗಗಳ ಜನರೊಂದಿಗೆ ಬೆರುಯುವಿಕೆಯ ಸಂದರ್ಭದಲ್ಲಿ ಹಿಂಜರಿಕೆಯಿದೆ. ಇಲ್ಲಿ ಅತಿ ಹೆಚ್ಚು ಭೂಮಿ ಹೊಂದಿದ ಒಂದು ಸಮುದಾಯವೆಂದರೆ ಲಿಂಗಾಯತರು, ರಾಜಕೀಯವಾಗಿಯೂ ಹಾಗೂ ಜನಸಂಖ್ಯೆ ಬಲವಾಗಿ ಈ ಸಮುದಾಯದವು ಈ ಊರಿಲ್ಲಿ ಮುಂದಿದೆ.

## ೪. ಕರ್ನಾರಹಟ್ಟಿ

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಕರ್ನಾರಹಟ್ಟಿಯಲ್ಲಿ ಡೊಂಬರ ಸಮುದಾಯದ ೧೯ ಕುಟುಂಬಗಳಿವೆ. ಇವರ ಪ್ರಮುಖ ವೃತ್ತಿ ಕೃಷಿಕೂಲಿಯೇ ಆಗಿದೆ. ಬಳ್ಳಾರಿ ಜಿಲ್ಲೆಯಲ್ಲಿಯೇ ತೀರ ಹಿಂದುಳಿದಿರುವ ಹಳ್ಳಿಯೆಂದರೆ ಕರ್ನಾರಹಟ್ಟಿಯೆಂದು ಯಾವ ಅನುಮಾನವಿಲ್ಲದೆ ಹೇಳಬಹುದು. ಇಂದಿಗೂ ಊರಿಗೆ, ಬಸ್ಸಿನ ವ್ಯವಸ್ಥೆ ಇಲ್ಲ. ಅಲ್ಲದೆ ಸರ್ಕಾರದ ಯಾವೊಂದು ಯೋಜನೆಗಳು ಇವರನ್ನು ತಲುಪಿಲ್ಲ.

ಕರ್ನಾರಹಟ್ಟಿಯಲ್ಲಿ ಅನಕ್ಷರಸ್ಥರಿಂದ ಕೂಡಿದ ಹಳ್ಳಿಯಾಗಿದೆ. ಆ ಊರಿನಲ್ಲಿ ಕೇವಲ ಎರಡೇ ಜಾತಿಗಳಿರುವುದು. ಒಂದು ಮ್ಯಾಸನಾಯಕರು. ಎರಡನೆಯದಾಗಿ ಡೊಂಬರು. ಸಾಮಾಜಿಕವಾಗಿ ಡೊಂಬರನ್ನು ಮ್ಯಾಸನಾಯಕರು ಕೀಳಾಗಿ ಕಾಣುತ್ತಾರೆ. ಅಲ್ಲದೆ ನಾಯಕರು ನಮ್ಮ ಜಾತಿಯೇ ದೊಡ್ಡದು ಎಂಬುದಾಗಿ ಹೇಳುತ್ತಾರೆ.

ಈ ಊರಿನಲ್ಲಿ ಕೇವಲ ಎರಡು ಕಸಬುಗಳು. ಒಂದು ವ್ಯವಸಾಯ ಮತ್ತೊಂದು ಕೃಷಿಕೂಲಿ, ಇಲ್ಲಿ

ಡೊಂಬರ ೧೧ ಕುಟುಂಬಗಳು ೨೫ ಎಕರೆ ಒಣ ಭೂಮಿಯನ್ನು ಹೊಂದಿವೆ. ಮೇಲಿನ ಅರ್ಧಷ್ಟು ಭೂಮಿಯನ್ನು ಇವರು ಬೀಳು ಬಿಟ್ಟಿದ್ದಾರೆ. ಬದಲಾಗಿ ಇತರರ ಹೊಲಗಳಲ್ಲಿ ಕೂಲಿಗಳಾಗಿ ದುಡಿಯಲು ಹೋಗುತ್ತಾರೆ. ಒಂಬತ್ತು ಕುಟುಂಬಗಳು ಭೂಹೀನರಾಗಿದ್ದಾರೆ. ಸರ್ಕಾರಿ ಹುದ್ದೆಯಲ್ಲಿ ಯಾರೂ ಇಲ್ಲ. ಯಾವ ಚಿಕ್ಕಪುಟ್ಟ ವ್ಯಾಪಾರಗಳನ್ನು ಸಹ ಇವರು ಮಾಡುತ್ತಿಲ್ಲ. ೨೯ ಜನರು ಕೃಷಿಕೂಲಿಗಳಾಗಿಯೇ ದುಡಿಯುತ್ತಿದ್ದಾರೆ.

ವಸತಿಗೆ ಸಂಬಂಧಿಸಿದಂತೆ ೧೩ ಗುಡಿಸಲು, ೪ ಸರ್ಕಾರಿ ಆಶ್ರಯ ಮನೆಗಳು, ೬ ಕುಟುಂಬಗಳಿಗೆ ವಾಸ ಮಾಡಲು ಸ್ವತಃ ಮನೆಗಳೇ ಇಲ್ಲ. ಇವರು ಬಾಡಿಗೆ ಗುಡಿಸಲುಗಳಲ್ಲಿ ವಾಸಮಾಡುತ್ತಿದ್ದಾರೆ. ಈ ಊರಿನಲ್ಲಿ ಮ್ಯಾಸನಾಯಕರು ಅಧಿಕ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಇವರು ಹೆಚ್ಚಿನ ಭೂಮಿಯನ್ನು ಸಹ ಹೊಂದಿದ್ದಾರೆ.

ಕೂಡ್ಲಿಗಿ ತಾಲೂಕಿನ ಚಿಕ್ಕಜೋಗಿಹಳ್ಳಿಯಿಂದ ೬ ಕಿ.ಮೀ. ಪ್ರಯಾಣ ಮಾಡಿದರೆ, ಕರ್ನಾರಹಟ್ಟಿಯೆಂಬ ಒಂದು ಚಿಕ್ಕಹಳ್ಳಿ ಸಿಗುತ್ತದೆ. ಈ ಹಳ್ಳಿ ಕರ್ನಾಟಕದಲ್ಲಿಯೇ ಅತಿ ಹಿಂದುಳಿದ ಮತ್ತು ಅಭಿವೃದ್ಧಿಯಿಂದ ವಂಚಿತಗೊಂಡು ಸರಕಾರದಿಂದ ನಿರ್ಲಕ್ಷಿಸಲ್ಪಟ್ಟ ಹಳ್ಳಿ ಕರ್ನಾರಹಟ್ಟಿ, ನಾನು ಕ್ಷೇತ್ರಕಾರ್ಯಕ್ಕೆ ಹೋದ ಸಂದರ್ಭದಲ್ಲಿ ಸ್ವತಃ ನನ್ನ ಅನುಭವಕ್ಕೆ ಬಂದ ಸಂಗತಿಯಾಗಿದೆ. ಇಲ್ಲಿ ಡೊಂಬರು ಅಧಿಕ ಸಂಖ್ಯೆಯಲ್ಲಿದ್ದಾರೆ. ಅವರೆಲ್ಲಾ ಅವಿದ್ಯಾವಂತರು, ಇವರೆಲ್ಲಾ ಇಂದಿಗೂ ಗುಡಿಸಲುಗಳಲ್ಲಿ ವಾಸ ಮಾಡುತ್ತಾರೆ. ಯಾವೊಂದು ಗುಡಿಸಲಿಗೆ ವಿದ್ಯುತ್ ದೀಪದ ವ್ಯವಸ್ಥೆಯೂ ಇಲ್ಲ. ಡೊಂಬರ ಕೇರಿಯಲ್ಲಿ ೧೫ ಗುಡಿಸಲುಗಳಿವೆ. ಇದುವರೆಗೂ, ಸರಕಾರದಿಂದ ಒಂದಾದರೂ ಆಶ್ರಯ ಮನೆ ಸೌಲಭ್ಯ ಕಲ್ಪಿಸಿಕೊಟ್ಟಿಲ್ಲ. ಇಂದಿಗೂ ಇವರು ಗುಡಿಸಲಿನಲ್ಲಿ ಸೀಮೆಎಣ್ಣೆಯ ದೀಪ ಬೆಳಕು ಗತಿಯಾಗಿದೆ. ಭಾಗ್ಯಜ್ಯೋತಿಯಂಥ ಯೋಜನೆ ಇವರಿಗೆ ತಲುಪುವಂತಾಗಿಲ್ಲ. ಪಡಿತರಚೀಟಿ ಹಲವರಿಗೆ ಇನ್ನು ಸಿಕ್ಕಿಲ್ಲ. ಇಲ್ಲಿ ವಾಸ ಮಾಡುತ್ತಿರುವ ಯಾವೊಬ್ಬ ಡೊಂಬರ ಕುಟುಂಬಕ್ಕೂ ಭೂಮಿ ಮತ್ತು ಎತ್ತುಗಳು ಇಲ್ಲ. ಬೇರೊಬ್ಬರ ಹೊಲದಲ್ಲಿ ಕೂಲಿ ಕೆಲಸ ಮಾಡಿ, ತಮ್ಮದೇ ಹೊಟ್ಟೆ ತುಂಬಿಸಿಕೊಳ್ಳುತ್ತಾರೆ. ವಯೋವೃದ್ಧರಿಗೆ ವಿಧವೆಯರಿಗೆ, ವೈಸಿಯರಿಗೆ, ಪಿಂಚಣಿ ಸಹ ಸಿಕ್ಕುವುದಿಲ್ಲವಂತೆ. ಕರ್ನಾರಟ್ಟಿಯಲ್ಲಿ, ಡೊಂಬರು ಮತ್ತು ಮ್ಯಾಸನಾಯಕರು ಎಂಬ ಎರಡು ಜಾತಿಯ ವರ್ಗದವರು ಮಾತ್ರ ವಾಸ ಮಾಡುತ್ತಾರೆ. ಈ ಊರಲ್ಲಿ ಅಧಿಕಾರದ, ಕಾರುಬಾರು ನಾಯಕರದ್ದೇ ಆಗಿದೆ. ಡೊಂಬರ ಕೇರಿಯಲ್ಲಿ ಇದುವರೆಗೂ ಯಾವೊಬ್ಬ ಡೊಂಬರು ಗ್ರಾಮಪಂಚಾಯಿತಿ ಸದಸ್ಯ ಆಗಿಲ್ಲವಂತೆ. ನಾವು ಎಸ್.ಸಿ ಅಂಥ ಎಲ್ಲಾರು ಹೇಳುತ್ತಾರೆ. ಆದರೆ ಪ್ರತಿ ಸಾರಿ ನಾಯಕರೇ ಗ್ರಾಮಪಂಚಾಯಿತಿ ಸದಸ್ಯರು ಆಗುತ್ತಾರೆ. ನಾವು ಇದುವರೆಗೂ ಆಗಿಲ್ಲ ಎನ್ನುತ್ತಾರೆ. ಸರಕಾರ ಇನ್ನೂ ಮುಂತಾದವರೂ ಇಂಥ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಸಾಧ್ಯವಾದಷ್ಟು

ಸರಕಾರಿ, ವಿಶೇಷ ಯೋಜನೆಗಳು ಇವರಿಗೆ, ನೇರವಾಗಿ ತಲುಪುವಂತಾಗಲಿ, ಇದಕ್ಕೆ ಸರಕಾರ ಮತ್ತು ಸಮಾಜ ಸೇವಕರು, ರಾಜಕಾರಣಿಗಳು ಮುಂದೆ ಬಂದು. ಆ ಊರಿಗೆ, ಬೇಟೆ ಕೊಟ್ಟು ತಮ್ಮ ಸೇವೆಯಿಂದ ಇಲ್ಲಿನ ಡೊಂಬರು ಸುಧಾರಾಣೆಯಾಗುವಂತಾಗಲಿ.

೫. ಮರಬನಹಳ್ಳಿ

ಮರಬನಹಳ್ಳಿಯಲ್ಲಿರುವ ಡೊಂಬರು ತೀರ ಹಿಂದುಳಿದಿದ್ದಾರೆ. ಹರಕಲು, ಮುರಕಲು ಗುಡಿಸಲುಗಳಲ್ಲಿ ವಾಸಿಸುತ್ತಿದ್ದಾರೆ. ಆ ಊರಿನಲ್ಲಿ ಡೊಂಬರು ೧೪ ಕುಟುಂಬಗಳಿವೆ. ನಾಲ್ಕು ಕುಟುಂಬಗಳಿಗೆ ವಾಸ ಮಾಡಲು ಗುಡಿಸಲು ಸಹ ಇಲ್ಲ. ಇವರ ವಾಸ ಡೊಂಬರ ಕೇರಿ ಬೀದಿಯ ಪಕ್ಕದಲ್ಲಿಯೇ ಇವೆ. ಮತ್ತು ಕೆಲವರಿಗೆ ಮನೆಯಿಲ್ಲದ ಕಾರಣ ಒಂದೇ ಗುಡಿಸಲಿನಲ್ಲಿ ಅವಿಭಕ್ತ ಕುಟುಂಬದಂತೆ ವಾಸಮಾಡುತ್ತಿದ್ದಾರೆ. ಆ ಊರಿನಲ್ಲಿ ಹೊಲೆಯರು, ಡೊಂಬರು, ಮ್ಯಾಸನಾಯಕರು, ಕುಟುಂಬದ ಮನೆಗಳು ಅಥವಾ ಗುಡಿಸಲುಗಳೇ ಅಧಿಕ ಸಂಖ್ಯೆಯಲ್ಲಿವೆ. ಇತರೆ, ನಾಲ್ಕು ಅಥವಾ ಆರು ಕುಟುಂಬದ ಮನೆಗಳು ಮುಂದುವರಿದ ಜಾತಿಯವು ಆಗಿವೆ. ಇಲ್ಲಿ ಮ್ಯಾಸನಾಯಕರಿಗೆ ಅಲ್ಪಸ್ವಲ್ಪ ಭೂಮಿಯಿದೆ. ಜೊತೆಗೆ ಊರಿನ ರಾಜಕೀಯ ಇವರ ಕೈಯಲ್ಲಿರುತ್ತದೆ. ಹಾಗೆ, ಇಲ್ಲಿ ಹೊಲೆಯರು ಬದುಕು ಸಹ, ಅತಿ ಕೆಳಮಟ್ಟದಲ್ಲಿಯೇ ಇದೆ. ಡೊಂಬರು ಒಂದು ಕುಟುಂಬಕ್ಕೆ ಮಾತ್ರ ೪ ಎಕರೆ, ಒಣ ಭೂಮಿ ಇದೆ, ಎರಡು ಎಕರೆ, ಪಂಪಸೆಟ್ ನೀರಿನಿಂದ ಬೆಳೆ ತೆಗೆಯುತ್ತಾರೆ. ಉಳಿದ ಹನ್ನೆರಡು ಕುಟುಂಬದವರು ಇತರರ ಹೊಲಗದ್ದೆಗಳಲ್ಲಿ ಕೆಲಸ ಮಾಡುವರು. ಹೆಣ್ಣುಮಕ್ಕಳಿಗೆ, ಹದಿನೈದು ರೂಪಾಯಿಗಳು ಮತ್ತು ಗಂಡಸರಿಗೆ, ೨೦ ರೂ. ಕೂಲಿಯ ಕೆಲಸ ಮಾಡುತ್ತಾರೆ. ಈ ಕೆಲಸ ಸಹ ಇಡೀ ವರ್ಷ ಪೂರ್ತಿಯಿರುವುದಿಲ್ಲ. ಮೊದಲಿನಂತೆ ಡೊಂಬರಾಟ ವೃತ್ತಿ ಮಾಡಿ ಹೊಟ್ಟೆ ತುಂಬಿಸಿಕೊಳ್ಳೋಣವೆಂದರೆ, ಆವೃತ್ತಿಯನ್ನು ನಮ್ಮ ತಾತ, ಮುತ್ತಾತರ ಕಾಲದಲ್ಲಿಯೇ ಮರೆತು ಬಿಟ್ಟಿದ್ದಾರೆ. ಇತರೆ ಯಾವುದೇ ನಿರ್ದಿಷ್ಟವಾದ ಕರಕುಶಲ ಕಲೆಯಾಗಲಿ, ಕುಲಕಸುಬಾಗಲಿ ಇವರಲ್ಲಿ ಇಲ್ಲದಂತಾಗಿದೆ. ನಿಮ್ಮ ಕಸುಬು ಯಾವುದು ಎಂದು ಕೇಳಿದರೆ. ನಮ್ಮ ಕಸುಬು, ಕೂಲಿ ಬೇಸಾಯವೆಂದು ಹೇಳುತ್ತಾರೆ. ಸರಕಾರದಿಂದ ಬರುವ ಸೌಲಭ್ಯಗಳನ್ನು ಪಡೆದುಕೊಳ್ಳುವ ದಾರಿಯೇ ಗೊತ್ತಿಲ್ಲವಂತೆ. ಅಲ್ಲದೆ, ಇವರಲ್ಲಿ ಯಾರು ವಿದ್ಯಾವಂತ ಇಲ್ಲ. ಇತ್ತೀಚೆಗೆ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದಾರೆ. ಮಕ್ಕಳಿಗೆ ವಿದ್ಯಾಭ್ಯಾಸ ಕೊಡುಸುವುದರಿಂದ ಮುಂದೆ ಉದ್ಯೋಗ ಸಿಗುವುದಿಲ್ಲ. ಇದರಿಂದ ಓದು ಕಲಿಸುವುದರಿಂದ ಯಾವ ಪ್ರಯೋಜನವಿದೆ ಎಂಬ ಭಾವನೆ ಕೆಲವರಲ್ಲಿ ಬೇರೂರಿದೆ. ಅಲ್ಲದೆ ನಿರುದ್ಯೋಗಿಗಳಾದಾಗ ಇವರಿಂದ ಕೂಲಿ ಕೆಲಸ ಕೂಡ, ಮಾಡುವುದು ಆಗದು ಎನ್ನುತ್ತಾರೆ. ಗ್ರಾಮಪಂಚಾಯತಿ ಮತ್ತು ತಾಲೂಕು ಜಿಲ್ಲಾ ಪಂಚಾಯತಿ ಇಂಥ ಹಳ್ಳಿಗಳಿಂದ ಓಟು ಮಾತ್ರ ಪಡೆದು ಆರಿಸಿ ಬಂದನಂತರ, ತೀರ ಹಿಂದುಳಿದ

ಮರಬನಹಳ್ಳಿ ಕರ್ನಾರಹಟ್ಟಿಯಂತ ಹಳ್ಳಿಗಳನ್ನು ಕೊನೆಗೆ ಮರೆತು ಬಿಡುತ್ತಾರೆ. ಯಾವುದು ಅಧಿಕ ಜನಸಂಖ್ಯೆಯಿಂದ ಮುಂದುವರೆದ ಯಾವುದು ಒಂದು ಹಳ್ಳಿಗೆ, ಅಂಟಿಕೊಂಡು ಬಿಡುತ್ತಾರೆ.

**ಸಂಡೂರು ತಾಲೂಕಿನಲ್ಲಿ ಡೊಂಬರು ವಾಸಿಸುತ್ತಿರುವ ಗ್ರಾಮಗಳು**

೧. ಸಂಡೂರು

೨. ಸೋವೇನಹಳ್ಳಿ

**೧. ಸಂಡೂರು**

ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ಡೊಂಬರ ಸಮುದಾಯದ ೧೨ ಕುಟುಂಬಗಳಿವೆ. ಈ ಕುಟುಂಬಗಳಲ್ಲಿ ಗಂಡಸರು ೫೭ ಮತ್ತು ಹೆಂಗಸರು ೫೧ ಒಟ್ಟು ೧೦೮ ಜನರಿದ್ದಾರೆ. ಅಲ್ಲಿನ ಡೊಂಬರ ಸಾಮಾಜಿಕ ಸ್ಥಿತಿಯು ಇತರೆ ಕೆಳಜಾತಿ ಸಮುದಾಯಗಳೊಂದಿಗೆ ಹೋಲಿಸಿದರೆ ಸಾಧಾರಣವಾಗಿದೆ. ಹಿಂದಕ್ಕೆ ಡೊಂಬರರೆಂದರೆ ಇತರರು ಕೀಳಾಗಿ ಕಾಣುತ್ತಿದ್ದರು. ಇಂದು ಯಾರೂ ನಮ್ಮ ಸಮುದಾಯದವರನ್ನು ಕೀಳಾಗಿ ಕಾಣುವುದಿಲ್ಲವೆಂದು ಹೇಳುತ್ತಾರೆ.

ಇಲ್ಲಿನ ಡೊಂಬರು ಹತ್ತು ಹಲವಾರು ಕಸಬುಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇತರ ಪ್ರಮುಖ ಕಸಬುಗಳೆಂದರೆ ಕೃಷಿ, ಬೇಲ್‌ದಾರ ಕೆಲಸ ಮತ್ತು ಕೃಷಿಕೂಲಿ ಹಾಗೆ ಚಿಕ್ಕಪುಟ್ಟ ವ್ಯಾಪಾರ ಮುಂತಾದವುಗಳಲ್ಲಿ ತೊಡಗಿಕೊಂಡಿದ್ದಾರೆ. ವಸತಿ ಮಾದರಿಗೆ ಸಂಬಂಧಿಸಿದಂತೆ ಎಂಟು ಮಾಳಿಗೆ ಮನೆಗಳಿವೆ. ಎರಡು ಸರ್ಕಾರಿ ಮನೆಗಳು ಎರಡು ಆರ್.ಸಿ.ಸಿ. ಮನೆಗಳು ಮತ್ತು ಮೂರು ಕುಟುಂಬ ಮನೆರಹಿತವಾಗಿವೆ. ಇವರು ಬಾಡಿಗೆ ಮನೆಯಲ್ಲಿ ವಾಸಮಾಡುತ್ತಿದ್ದಾರೆ. ಐದು ಕುಟುಂಬದವರಿಗೆ ಪಡಿತರಚೀಟಿ ಸಿಕ್ಕಿಲ್ಲ. ಎಂಟು ಕುಟುಂಬಗಳು ೩೫ ಎಕರೆ ಒಣಭೂಮಿಯನ್ನು ಹೊಂದಿವೆ. ಉಳಿದ ಏಳು ಕುಟುಂಬಗಳು ಭೂರಹಿತರಾಗಿದ್ದಾರೆ.

೧೫ ಜನರು ಕೃಷಿಕೂಲಿಗಳಾಗಿದ್ದಾರೆ. ೯ ಜನರು ಚಿಕ್ಕಪುಟ್ಟ ವ್ಯಾಪಾರಗಳನ್ನು ಮಾಡಿಕೊಂಡಿದ್ದಾರೆ. ೨೫ ಜನರು ಬೇಲ್‌ದಾರ್‌ಗಳಿದ್ದಾರೆ. ೧೫ ಜನರು ಖಾಸಗಿ ಕಂಪನಿಗಳಲ್ಲಿ ದಿನಗೂಲಿಗಳಾಗಿ ದುಡಿಯುತ್ತಿದ್ದಾರೆ. ಹೀಗೆ ಸಮುದಾಯವು ಬದಲಾವಣೆ ದಿಕ್ಕಿನ ಕಡೆ ಹೆಜ್ಜೆ ಇಡುತ್ತಿದೆ ಎಂದು ಹೇಳಬಹುದು. ನಗರ ಪರಿಸರದಲ್ಲಿ ವಾಸಮಾಡುತ್ತಿರುವವರ ಆರ್ಥಿಕ ಸ್ಥಿತಿ ತಕ್ಕಮಟ್ಟಿಗಾದರೂ ಸುಧಾರಣೆಯಾಗಿದೆ ಎಂಬುದನ್ನು ಮೇಲಿನ ವೃತ್ತಿಗಳ ಆಧಾರದ ಮುಖಾಂತರ ಹೇಳಬಹುದು. ಗ್ರಾಮಮಾಹಿತಿಯ ಪ್ರಕಾರ ಸಂಡೂರಿನಲ್ಲಿ ಕುರುಬರು, ಮುಸಲ್ಮಾರು ಮತ್ತು ನಾಯಕರು ಸಬಲರಾಗಿದ್ದಾರೆ. ಮತ್ತು ಇಲ್ಲಿ ರಾಜಕೀಯವಾಗಿ ನಾಯಕರು ಮತ್ತು ಕುರುಬರದೇ ಕಾರುಬಾರು ಆಗಿದೆ. ಜನಸಂಖ್ಯೆ

ದೃಷ್ಟಿಯಿಂದಲೂ ಸಮುದಾಯಗಳು ಪ್ರಬಲವಾಗಿವೆ. ಶೆಟ್ಟರು ಮತ್ತು ಇತರೆ ಜನರು ವ್ಯಾಪಾರಸ್ಥರಾಗಿದ್ದಾರೆ. ಹೀಗಾಗಿ ಆರ್ಥಿಕವಾಗಿ ಈ ಸಮುದಾಯಗಳು ಪ್ರಬಲವಾಗಿವೆ.

೨. ಸೋವೇನಹಳ್ಳಿ

ಬಳ್ಳಾರಿಯ ಸಂಡೂರು ತಾಲೂಕಿನ ಸೋವೇನಹಳ್ಳಿಯಲ್ಲಿ ಡೊಂಬರ ಸಮುದಾಯವು ಒಟ್ಟು ೧೨ ಕುಟುಂಬಗಳಿವೆ. ಗಂಡಸರು ೨೯ ಮತ್ತು ಹೆಂಗಸರು ೩೩. ಒಟ್ಟು ೬೨ ಜನ ಈ ಊರಿನಲ್ಲಿ ವಾಸ ವಾಸವಾಗಿದ್ದಾರೆ. ಇಲ್ಲಿ ಈ ಸಮುದಾಯದ ಸಾಮಾಜಿಕ ಸ್ಥಿತಿ, ಸುಧಾರಣೆಯಾಗಿದೆ. ಇತರೆ ಸಮುದಾಯಗಳು ಸಹ ಸ್ಪರ್ಶರಂತೆ ಕಾಣುತ್ತಾರೆ. ಡೊಂಬರ ವಿವಾಹ ಸಂದರ್ಭಗಳಲ್ಲಿಯೂ ಇತರ ವರ್ಗದವರು ಭಾಗವಹಿಸುತ್ತಾರೆ. ಇನ್ನೂ ಡೊಂಬರಲ್ಲಿ ಸಾಮಾಜಿಕ ಹಿಂಜರಿಕೆಗಳಿವೆ.

ಸಮುದಾಯದ ಪ್ರಮುಖ ಆರ್ಥಿಕ ಮೂಲಗಳೆಂದರೆ ಕೃಷಿಕೂಲಿ ಮತ್ತು ಚಿಕ್ಕಪುಟ್ಟ ವ್ಯಾಪಾರಗಳಾಗಿವೆ. ಸಮುದಾಯವು ಹೊಂದಿರುವ ವಸತಿ ಮಾದರಿಗಳು ಹೀಗಿವೆ. ಒಂದು ಗುಡಿಸಲು ಮತ್ತು ಒಂಬತ್ತು ಮಾಳಿಗೆ ಮನೆಗಳು, ಸರ್ಕಾರಿ ಮನೆ ಒಂದು, ಆರ್.ಸಿ.ಸಿ. ಮನೆ ಒಂದು ಇದೆ. ಸೋವೇನಹಳ್ಳಿಯಲ್ಲಿ ಪ್ರತಿಯೊಬ್ಬರೂ ಮನೆಗಳನ್ನು ಹೊಂದಿದ್ದಾರೆ. ಒಟ್ಟು ೬ ಕುಟುಂಬಗಳು ೧೭ ಎಕರೆ ಒಣಭೂಮಿಯನ್ನು ಹೊಂದಿವೆ. ಉಳಿದ ೬ ಕುಟುಂಬದವರು ಭೂಹೀನರಾಗಿದ್ದಾರೆ. ೧೮ ಜನರು ಕೃಷಿಕೂಲಿಗಳಾಗಿ ದುಡಿಯುತ್ತಿದ್ದಾರೆ. ಸರ್ಕಾರಿ ಹುದ್ದೆಯಲ್ಲಿ ಒಬ್ಬರು ಇದ್ದಾರೆ. ಉಳಿದ ಜನರು ಇತರೆ, ಹಲವಾರು ವೃತ್ತಿಗಳಲ್ಲಿ ತೊಡಗಿಕೊಂಡಿದ್ದಾರೆ. ಹೀಗೆ, ಇವರ ಆರ್ಥಿಕ ಜೀವನ ಇನ್ನೂ ಉತ್ತಮ ಮಟ್ಟದಲ್ಲಿಲ್ಲ ಎಂದು ಹೇಳಬಹುದು.

ಸೋವೇನಹಳ್ಳಿಯಲ್ಲಿ ಲಿಂಗಾಯಿತರು ಮತ್ತು ಶೆಟ್ಟರು ಮತ್ತು ರೆಡ್ಡಿಗಳು ಅಧಿಕ ಭೂಮಿಯನ್ನು ಹೊಂದಿದ ಸಮುದಾಯಗಳಾಗಿವೆ. ರಾಜಕೀಯವಾಗಿ ಲಿಂಗಾಯಿತರದೇ ಮೇಲುಗೈಯಾಗಿದೆ. ಹಾಗೆ, ಜನಸಂಖ್ಯೆ ದೃಷ್ಟಿಯಿಂದಲೂ ಈ ಸಮುದಾಯವೇ ಮುಂದಿದೆ.

ಸಿರುಗುಪ್ಪ ತಾಲೂಕಿನಲ್ಲಿ ಡೊಂಬರು ವಾಸಿಸುತ್ತಿರುವ ಗ್ರಾಮಗಳು

೧. ಬೂದುಗುಪ್ಪ

೧. ಬೂದುಗುಪ್ಪ

ಬಳ್ಳಾರಿಯ ಜಿಲ್ಲೆಯ ಸಿರುಗುಪ್ಪ ತಾಲೂಕಿನ ಬೂದುಗುಪ್ಪದಲ್ಲಿ ಡೊಂಬರು ಸಮುದಾಯದ ೬ ಕುಟುಂಬಗಳಿವೆ. ಅದರಲ್ಲಿ ಗಂಡಸರು ೩೩, ಹೆಂಗಸರು ೩೨ ಒಟ್ಟು ೬೫ ಜನಸಂಖ್ಯೆ ಇದೆ. ಡೊಂಬರ

ಸಮುದಾಯದ ಸಾಮಾಜಿಕ ಸ್ಥಾನಮಾನಗಳು ಇತರೆ ಸಮುದಾಯಗಳೊಂದಿಗೆ ಹೊಂದಿಕೊಂಡು ಸ್ಪರ್ಶರಂತೆ ಗುರುತಿಸಿಕೊಂಡಿದ್ದಾರೆ. ಡೊಂಬರ ಸಮುದಾಯದ ಮನೆಗಳು ನಾಯಕರು ಮತ್ತು ಉಪ್ಪಾರ ಮನೆಗಳ ಹತ್ತಿರವೇ ಇರುವುದರಿಂದ ನಾಯಕರು ಮತ್ತು ಉಪ್ಪಾರರು ಸೇರಿದಂತೆ, ಇತರೆ ಮೇಲ್ವರ್ಗದ ಕೆಲವು ಸಮುದಾಯಗಳ ಜನರು ಡೊಂಬರ ಮನೆಯೊಳಗೆ ಬರುತ್ತಾರೆ. ಹಾಗೆ ಡೊಂಬರು ಸಹ ಅವರ ಮನೆಯೊಳಗೆ ಹೋಗುತ್ತಾರೆ. ಆದರೆ ಅವರು ಡೊಂಬರ ಮನೆಯೊಳಗೆ ಊಟ ಮಾಡುವುದಿಲ್ಲ. ಇತರೆ ಮೇಲ್ವರ್ಗದ ಸಮುದಾಯಗಳ ಜತೆಗೆ ಡೊಂಬರು ಬೈಲಾಟವನ್ನು ಆಡುತ್ತಾರೆ. ಡೊಂಬರೇ ಹೇಳುವಂತೆ ಹೊಲೆಯ ಮತ್ತು ಮಾದಿಗರಂತೆ ನಮ್ಮನ್ನು ಇತರೆ ಸಮುದಾಯಗಳು ಕೀಳಾಗಿ ಕಾಣುವುದಿಲ್ಲ ಎನ್ನುತ್ತಾರೆ.

ಈ ಊರಿನಲ್ಲಿ ಆರು ಕುಟುಂಬಗಳಿವೆ. ಇದರಲ್ಲಿ ಎರಡು ಸರ್ಕಾರಿ ಆಶ್ರಯ ಮನೆಗಳು ಮತ್ತು ಐದು ಮಾಳಿಗೆ ಮನೆಗಳು ಇವೆ. ಒಂದು ಕುಟುಂಬಕ್ಕೆ ಸ್ವತಃ ಮನೆಯಿಲ್ಲ ಆದುದರಿಂದ ಇವರು ಬಾಡಿಗೆ ಮನೆಯಲ್ಲಿ ವಾಸಮಾಡುತ್ತಿದ್ದಾರೆ. ನಾಲ್ಕು ಕುಟುಂಬಗಳು ೫೪ ಎಕರೆ ಒಣಭೂಮಿ ಮತ್ತು ೨೫ ಎಕರೆ ನಿರಾವರಿ ಭೂಮಿಯನ್ನು ಹೊಂದಿದ್ದಾರೆ. ಇವರು ಹೊಂದಿರುವ ಒಟ್ಟು ಭೂಮಿ ೭೯ ಎಕರೆಗಳು ಇನ್ನೂ ಎರಡು ಕುಟುಂಬದವರು ಭೂರಹಿತರಾಗಿದ್ದಾರೆ. ಕೃಷಿಕೂಲಿಯನ್ನು ನಂಬಿ ಜೀವನ ಮಾಡುವವರು ಹನ್ನೆರಡು ಜನರಿದ್ದಾರೆ. ವ್ಯಾಪಾರಸ್ಥರು ಮೂರು ಜನರಿದ್ದಾರೆ. ಹಾಗೆ ಇತರೆ ಖಾಸಗಿ ಕೆಲಸಗಳಲ್ಲಿ ತೊಡಗಿದವರು ಇಬ್ಬರು ಇದ್ದಾರೆ. ಸರಕಾರಿ ಉದ್ಯೋಗದಲ್ಲಿ ಯಾರು ಇಲ್ಲ. ಇತ್ತೀಚೆಗೆ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಶುರುಮಾಡಿದ್ದಾರೆ.

ಬೂದುಗುಪ್ಪದಲ್ಲಿ ನಾಯಕರು, ಕುರುಬರು, ರೆಡ್ಡಿಯ ಸಮುದಾಯಗಳು ಅತಿಹೆಚ್ಚಿನ ಭೂಹಿಡುವಳಿ ಹೊಂದಿದ ಸಮುದಾಯಗಳಾಗಿವೆ. ರಾಜಕೀಯವಾಗಿ, ನಾಯಕರ ಸಮುದಾಯವು ಪ್ರಭಲವಾಗಿದೆ. ಮತ್ತು ಜನಸಂಖ್ಯೆ ದೃಷ್ಟಿಯಿಂದಲೂ ಸಮುದಾಯವೇ ಮುಂದಿದೆ.

## ಡೊಂಬರ ಸಾಮಾಜಿಕ ಜೀವನ

ಸಾಮಾಜಿಕವಾಗಿ ನಮ್ಮನ್ನು ಯಾರು ಕೀಳಾಗಿ ಕಾಣುವುದಿಲ್ಲ. ನಾವು ಇತರೆ ಮೇಲುವರ್ಗದವರೊಡನೆ, ಬೆರತು ಹೊಂದಾಣಿಕೆಯಿಂದ ಇದ್ದೇವೆ. ಏನೂ ನಮ್ಮ ತಾತ, ಅಜ್ಜಿಯ ಕಾಲದಲ್ಲಿಯ ಸಾಮಾಜಿಕ ಸ್ಥಿತಿ ಹೇಗಿತ್ತೋ ನಾವು ಕಾಣೆವು. ಈಗ ನಮ್ಮ ವರ್ತಮಾನದ ಸಾಮಾಜಿಕ ಪರಿಸ್ಥಿತಿ ತುಂಬಾ ಬದಲಾವಣೆಯಾಗಿದೆ. ನಮ್ಮ ಡೊಂಬರ ಜಾತಿಯಲ್ಲಿ ಅಂತರಜಾತಿಯ ವಿವಾಹಗಳನ್ನು ಸಹ ಮಾಡಿಕೊಂಡಿದ್ದಾರೆ. ಆದರೆ ಹಿಂದೆ ಅವರು ನಮ್ಮ ಜಾತಿಯ ಹೆಸರು ಡೊಂಬರು ಎಂದು ಹೇಳಿದರೆ,

ನಮ್ಮನ್ನು ಸಮಾಜದಲ್ಲಿ ಇತರರು ಕೀಳಾಗಿ ಕಾಣುತ್ತಾರೆ ಎಂದು ಬೇರೆ ಜಾತಿಯ ಹೆಸರನ್ನು ಸಹ ಹೇಳಿ ಕೊಂಡಿದ್ದಾರೆ. ಆದರೆ ಇಂತವರು ಹೆಣ್ಣನ್ನು ಕೊಡುವ ಮತ್ತು ತೆಗೆದುಕೊಳ್ಳುವುದು ಡೊಂಬರ ಜಾತಿಯಲ್ಲಿ ಆಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಎಲ್ಲಾ ಡೊಂಬರು ನಾವು ಇತರರಿಗಿಂತ ಕಡಿಮೆ ಏನು ಅಲ್ಲ ಎಂಬ ಭಾವನೆ ಮೂಡಿ, ತಮ್ಮ ಜಾತಿಯ ಹೆಸರನ್ನು ಧೈರ್ಯವಾಗಿ ಹೇಳಿಕೊಳ್ಳುತ್ತಿದ್ದಾರೆ. ಅಲ್ಲದೆ ತಮ್ಮ ಜಾತಿಯ ಸಂಘವನ್ನು ಸ್ಥಾಪಿಸಿಕೊಂಡು, ತಮ್ಮ ಸಮುದಾಯದ ಹಕ್ಕುಗಳಿಗೆ ಹೋರಾಟ ಮಾಡಲು ಸಿದ್ಧರಾಗಿದ್ದಾರೆ. ಕಮಲಾಪುರದಲ್ಲಿ ಈ ಸಮುದಾಯದ ಒಬ್ಬ ವ್ಯಕ್ತಿ ಪಟ್ಟಣ ಪಂಚಾಯತಿ ಅಧ್ಯಕ್ಷರು ಆಗಿದ್ದರು. ಹಾಗೆ ಆಚರಣೆಗಳಿಗೆ ಸಂಬಂಧಿಸಿದಂತೆ ಉದಾ. ಎಲೆಶಾಸ್ತ್ರ, ಮೈನೆರೆದಾಗ ಮಾಡುವ ಶಾಸ್ತ್ರಗಳು, ಮದುವೆ, ಹೆಣ್ಣು ಕೊಡುವ ತೆಗೆದುಕೊಳ್ಳುವ ಸಂದರ್ಭದಲ್ಲಿ ನಮ್ಮ ಸಮುದಾಯಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ಆಚರಣಾ ಪದ್ಧತಿಗಳು ಯಾವುದು ಇಲ್ಲ. ಇತರ ಸಮುದಾಯಗಳು ಆಚರಣೆ ಹೇಗೊ, ಹಾಗೆ ನಾವು ಸಹ ಅನುಸರಿಸುತ್ತೇವೆ ಎನ್ನುತ್ತಾರೆ. ವೃತ್ತಿಗೆ ಸಂಬಂಧಿಸಿದಂತೆ ನಿಮ್ಮ ಕುಲಕಸುಬು ಯಾವುದು ಎಂದು ಕೇಳಿದಾಗ, ಕೃಷಿಕೂಲಿಕಾರರು ಎಂಬುದಾಗಿ ಹೇಳುತ್ತಾರೆ. ಹಿಂದೆ ನಿಮ್ಮ ಸಮುದಾಯದಲ್ಲಿ ಡೊಂಬರಾಟ ಆಡುತ್ತಿದ್ದರು ಎಂದು ಕೆಲವರು ಹೇಳುತ್ತಾರೆ. ಇದಕ್ಕೆ ನಿಮ್ಮ ಅಬಿಪ್ರಾಯವೇನೆಂದು ಕೇಳಿದರೆ, ಬಳ್ಳಾರಿ ಜಿಲ್ಲೆಯಲ್ಲಿ ವಾಸಮಾಡುವ ಡೊಂಬರು ಹೇಳುವ ಪ್ರಕಾರ ನಾವು ಡೊಂಬರಾಟ ಆಡಿಲ್ಲ. ನಮ್ಮ ಅಜ್ಜಿ ಮುತ್ತಜ್ಜಿಯ ಕಾಲಕ್ಕೆ ಅದು ಕೊನೆಯಾಗಿ ನಾವು ನೆಲೆ ನಿಂತಿದ್ದೇವೆ ಎನ್ನುತ್ತಾರೆ.

ಸೋವೇನಹಳ್ಳಿ ಮತ್ತು ದಿಬ್ಬದಹಳ್ಳಿಯಲ್ಲಿ ಇಬ್ಬರು ವೃದ್ಧರಿಗೆ ಮತ್ತು ನಾಲ್ಕು ಜನ ವಿಧವೆಯರಿಗೆ, ವೇತನ ಆರಂಭದಲ್ಲಿ ಕೊಡುತ್ತಿದ್ದರಂತೆ. ಆದರೆ ಅದನ್ನು ಮಧ್ಯದಲ್ಲಿ ನಿಲ್ಲಿಸಿದ್ದಾರೆ. ಈಗ ಆ ವೇತನ ಕೂಡ ಬರುವುದಿಲ್ಲವಂತೆ ಒಬ್ಬರು ಕುಷ್ಠರೋಗದಿಂದ ನರಳುತ್ತಿದ್ದಾರೆ. ಅವನಿಗೆ ಇದುವರೆಗೂ, ಪಡಿತರ ಚೀಟಿ ಸಿಕ್ಕಿಲ್ಲ. ಮತ್ತು ಆಶ್ರಯ ಮನೆಯೂ ಸಹ ಇವರಿಗೆ ದೊರಕಿಲ್ಲವಂತೆ. ಸರಕಾರದಿಂದ ಲಭಿಸುವ ಸಬ್‌ಸಿಡಿ ಸಾಲ, ಇದುವರೆಗೂ ಯಾರಿಗೂ ದೊರಕಿಲ್ಲ ಎಂದು ಹೇಳುತ್ತಾರೆ. ಪರಿಶಿಷ್ಟ ಜಾತಿಯಲ್ಲಿ ಬರುವ ಇತರೆ ಸಮುದಾಯದವರು ಅಧಿಕ ಲಾಭ ಪಡೆದುಕೊಳ್ಳುತ್ತಿದ್ದಾರೆ ಎನ್ನುತ್ತಾರೆ.

### ಸಮಸ್ಯೆಗಳು

ಹೊಸಪೇಟೆ ತಾಲೂಕಿನಲ್ಲಿ ಡೊಂಬರು ಜಾತಿಪ್ರಮಾಣ ಪತ್ರದ ಸಮಸ್ಯೆಯನ್ನು ಎದರಿಸುತ್ತಿದ್ದಾರೆ. ನಾನು ಕ್ಷೇತ್ರಕಾರ್ಯಕ್ಕೆ ಹೋದ ಸಂದರ್ಭದಲ್ಲಿ ಕಮಲಾಪುರದ ಡೊಂಬರು ಈ ವಿಷಯವನ್ನು ಪ್ರಸ್ತಾಪಿಸುತ್ತಾ, ನಮ್ಮ ಸಮುದಾಯವನ್ನು ಸಹ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿಸಲಾಗಿದೆ. ಇದು ಎಲ್ಲಾರಿಗೂ ಗೊತ್ತಿರುವಂಥ ವಿಷಯ. ನಾವು ಡೊಂಬರು ನಮಗೆ ಪರಿಶಿಷ್ಟ ಜಾತಿಯ ಪ್ರಮಾಣ ಪತ್ರ

ನೀಡಿರೆಂದು ಹೊಸಪೇಟೆ ತಾಲೂಕು ಆಫೀಸಿನಲ್ಲಿ ತಹಶೀಲ್ದಾರರನ್ನು ಕೇಳಿಕೊಂಡೆವು. ಇದಕ್ಕೆ ಆ ಪುಣ್ಯಾತ್ಮ ಡೊಂಬರು ಎನ್ನುವ ಜಾತಿಯೇ ಇಲ್ಲ. ನೀವು ಡೊಂಬರೂ ಅಲ್ಲ. ಅದಕ್ಕೆ ನಿಮಗೆ ಯಾವ ಜಾತಿ ಪ್ರಮಾಣಪತ್ರ ಕೊಡಲು ಬರುವುದಿಲ್ಲವೆಂದು ನಿರಾಕರಿಸಿದರು. ಆಗ ನಾವು, ಕಮಲಾಪುರದಲ್ಲಿ ನಮ್ಮ ಡೊಂಬರು ೧೨ ಮನೆಗಳಿವೆ ಮತ್ತು ನಮಗೆ ಆಹಾರ ಇಲಾಖೆಯವರು ವಿತರಿಸಿರುವ ಪಡಿತಿರ ಚೀಟಿ, ಜೊತೆಗೆ ಮತದಾನದ ಗುರುತಿನ ಚೀಟಿ, ಸ್ಥಳೀಯ ಗ್ರಾಮ ಲೆಕ್ಕಿಗರು ಮತ್ತು ಕಂದಾಯ ಪರಿವೀಕ್ಷಕರು ಬರೆದುಕೊಟ್ಟಿರುವ ಪತ್ರಗಳಿಗೆ, ಈ ಎಲ್ಲವುಗಳನ್ನು ಪರೀಕ್ಷಿಸಿ ನೋಡಿ, ಡೊಂಬರು ಎಂದು ನಿರ್ಧರಿಸುವುದಕ್ಕೆ ಸಾಕ್ಷಿಯಾಗಿವೆ ಎಂದು ನಾವು ಕೇಳಿಕೊಂಡರೂ, ಪರಿಶಿಷ್ಟಜಾತಿ ಪಟ್ಟಿಯಲ್ಲಿ ಗೆಜೆಟಿಯರಲ್ಲಿ ಡೊಂಬರು ಎಂದು, ನಮೂದಿಸಿಲ್ಲ. ಇದಕ್ಕೆ ಬದಲಾಗಿ ಡೊಂ, ಡೊಂಬರ ಎಂದು ಗುರುತಿಸಿದ್ದಾರೆ. ಆದ್ದರಿಂದ ನೀವು ಬರಿ, ಡೊಂಬರು ಆಗಿರುವುದರಿಂದ, ಪರಿಶಿಷ್ಟ ಜಾತಿ ಪ್ರಮಾಣ ಪತ್ರ ನೀಡಲು ಬರುವುದಿಲ್ಲ ಎಂದು ಆಕ್ಷೇಪಣೆ ಮಾಡಿದರು. ಕೊನೆಗೆ, ಒಂದು ದಿನ ಕಮಲಾಪುರದಲ್ಲಿಯ ಎಲ್ಲಾ ಡೊಂಬರು ತಹಶೀಲ್ದಾರ ಆಫೀಸ್‌ಗೆ ಹೋಗಿ, ಕೇಳಿಕೊಂಡರು ಸಹ, ಜಾತಿ ಪ್ರಮಾಣ ಪತ್ರ ನೀಡಲು ಅವರು ನಿರಾಕರಿದರು. ನಾವು ಇಲ್ಲಿಗೆ ಸುಮ್ಮನಾಗಲಿಲ್ಲ. ಸ್ಥಳೀಯ ಎಂ.ಎಲ್.ಎ. ಯಿಂದ ಫೋನ್ ಮಾಡಿಸಿ, ಜೊತೆಗೆ, ಅವರ ಪಿ.ಎ.ಯಿಂದ ಡೊಂಬರರಿಗೆ, ಪರಿಶಿಷ್ಟ ಜಾತಿ ಪ್ರಮಾಣ ಪತ್ರ ಕೊಡಬಹುದು ಯಾವ ತಕರಾರು ಇಲ್ಲ. ಮುಂದೆ ತಕರಾರು ಬಂದರೆ, ಅದಕ್ಕೆ ನಾವೇ ಜವಾಬ್ದಾರರು ಇರುತ್ತೇವೆಂದು ತಮ್ಮ ಲೆಟರ್ ಪ್ಯಾಡಿನಲ್ಲಿ ಬರೆದುಕೊಟ್ಟು ಪಿ.ಎ. ಅವರು ಖುದ್ದಾಗಿ ತಹಶೀಲ್ದಾರರ ಕಛೇರಿಗೆ ಬಂದು ತಾಹಶೀಲ್ದಾರರಿಗೆ ಜಾತಿಪ್ರಮಾಣ ಪತ್ರವನ್ನು ಕಡ್ಡಾಯವಾಗಿ ನೀಡಬೇಕು ಎಂದು ಶಿಫಾರಸ್ಸು ಮಾಡಿದರು. ಈ ಶಿಫಾರಸ್ಸಿನ ಆಧಾರದ ಮೇರೆಗೆ ನಮಗೆ ಪರಿಶಿಷ್ಟ ಜಾತಿ ಪ್ರಮಾಣ ಪತ್ರ ಕೊಟ್ಟರು ಎಂಬ ಪ್ರಕರಣವನ್ನು ಈ ಸಂದರ್ಭದಲ್ಲಿ ನನ್ನ ಗಮನಕ್ಕೆ ತಂದರು. ಡೊಂಬರು ಮೊದಲೇ ಆರ್ಥಿಕವಾಗಿ ದುರ್ಬಲರು ಇಂಥವರನ್ನು ಹತ್ತಾರು ಸಾರಿ ಅಡ್ಡಾಡಿಸಿದ್ದರಿಂದ ಪ್ರಯಾಣದ ಖರ್ಚು ಹಾಳಾಗಿದ್ದಲ್ಲದೆ, ದಿನಾಲು ದುಡಿದರೆ ಅನ್ನ ಇಲ್ಲದಿದ್ದರೆ ಅದು ಇಲ್ಲ ಎನ್ನುವಂಥ ಪರಿಸ್ಥಿತಿಯಲ್ಲಿ ಬದುಕುವ ಇವರಿಗೆ ಈ ತಹಶೀಲ್ದಾರರು ಕಾಡಿಸಿ, ಪೀಡಿಸಿರುವುದು ಎಷ್ಟೊಂದು ಸಮಂಜಸ? ಡೊಂಬರು ಎಂದಾಕ್ಷಣ ಇವರು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಬರುತ್ತಾರೆ ಎಂಬುದು ಪ್ರತಿಯೊಬ್ಬ ವಿದ್ಯಾವಂತರಿಗೆ ತಿಳಿದಿರುವ ಸಮುದಾಯವೇ ಆಗಿದೆ. ಇದೇ ರೀತಿ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನಲ್ಲಿ ಸಹ ಆರಂಭದಲ್ಲಿ ಜಾತಿ ಪ್ರಮಾಣ ಪತ್ರ ನೀಡಲು ಆಕ್ಷೇಪಿಸಿ ತದನಂತರ ಯಾವ ತಕರಾರು ಇಲ್ಲದಂತೆ ಕೊಡುತ್ತಾ ಬಂದಿದ್ದಾರೆಂದು ತಿಳಿಸಿದರು.

ನಾನು ಫೀಲ್ಡ್‌ವರ್ಕ್ ಸಲುವಾಗಿ ಡೊಂಬರು ವಾಸಮಾಡುವ ಪ್ರತಿಹಳ್ಳಿಗೂ ಭೇಟಿ ಕೊಡುವುದರ ಮೂಲಕ ಮತ್ತು ಅವರ ಮನೆ ಬಾಗಿಲಿಗೆ ಹೋಗಿ ಅಂಕಿಅಂಶಗಳನ್ನು ಪಡೆಯಲಾಗಿದೆ. ಅಲ್ಲದೆ

ಡೊಂಬರ ಹಿರಿಯರನ್ನು ಸಂದರ್ಶನ ಮಾಡಲಾಗಿದೆ. ಇವರಿಗೆ ಇರುವ ಸಾಮಾಜಿಕ ಸ್ಥಾನಮಾನ ಕುರಿತು ಈ ಸಮುದಾಯದವರಿಂದಲೂ, ಮತ್ತೆ ನನಗೆ ಸಂಶಯ ಬಂದಲ್ಲಿ ಇತರ ಸಮುದಾಯದವರಿಂದಲೂ ಸಹ ನಿಖರವಾದ ಮಾಹಿತಿಯನ್ನು ಸಂಗ್ರಹಿಸಿದ್ದೇನೆ. ಪ್ರತಿ ಹಳ್ಳಿಯಲ್ಲಿ ಡೊಂಬರ ಮನೆಗಳು ಊರ ಅಂಚಿನಲ್ಲಿ, ನಾಯಕರ ಮತ್ತು ಕುರುಬರ, ಗೊಲ್ಲರ, ಮನೆಗಳು ಸಮೀಪದಲ್ಲಿವೆ. ಅವರ ಮಾಳಿಗೆಗಳಿಗೆ ಅಂಟಿಕೊಂಡು ಡೊಂಬರ ಮನೆಗಳಿವೆ. ಡೊಂಬರ ಮನೆಯೊಳಗೆ, ನಾಯಕರು, ಕುರುಬರು ಬರುತ್ತಾರೆ. ಇದನ್ನು ನಾನು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಣ್ಣಾರೆ ಕಂಡ ಸಂಗತಿಯಾಗಿದೆ. ಉದಾ. ದಿಬ್ಬದಹಳ್ಳಿಯಲ್ಲಿ ಮತ್ತು ಸೋವೇನಹಳ್ಳಿಯಲ್ಲಿ ಮಾಹಿತಿ ಪಡೆಯುತ್ತಿದ್ದಾನೆ. ಒಬ್ಬ ಡೊಂಬರ ಮನೆಯೊಳಗಡೆ ದಾಖಲೆ ಮಾಡಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಇವರ ಮನೆಯಲ್ಲಿ ಮೂರು, ನಾಲ್ಕು ಜನ ಇತರೆ ಗಂಡುಮಕ್ಕಳು ಇದ್ದರು. ಇವರನ್ನು ನಾನು, ಸ್ವಾಮಿ ನೀವು ಸಹಾ ಡೊಂಬರೇ ಎಂದು ಪ್ರಶ್ನೆ ಮಾಡಿದೆ. ಅದಕ್ಕೆ ಅವರು, ಇಲ್ಲ ಸಾರ್. ನಾವು ಕುರುಬರು ಎಂದು ಮತ್ತು ಒಬ್ಬ ನಾವು ನಾಯಕರು ಹಾಗೆ ಪಕ್ಕದಲ್ಲಿದ್ದೆ ಇನ್ನೊಬ್ಬ ನಾವು ಗೊಲ್ಲರೆಂದು ಉತ್ತರಿಸಿದರು. ಸ್ವಲ್ಪ ಹೊತ್ತಿನಲ್ಲಿ ಆ ಮನೆಯಲ್ಲಿದ್ದ ಮನೆಯ ಒಡತಿ, ಟೀ ತಂದು ನನಗೆ ಮತ್ತು ಆ ಮನೆಗೆ ಬಂದಿದ್ದ ಇತರ ಜಾತಿಯವರಿಗೆ ಎಲ್ಲಾರಿಗೂ ಕೊಟ್ಟಳು. ಅವರು ಸಹ ಯಾವುದೇ ಬೇಧವಿಲ್ಲದೆ ಟೀ ಕುಡಿದರು. ಆ ಮನೆಗೆ ಬಂದ ಇತರೆ ವರ್ಗದವರು ಹೊರಟುಹೋದರು. ನಮ್ಮ ಚರ್ಚೆ ಹಾಗೆ ಮುಂದುವರೆದಿತ್ತು. ಆಗ ಆ ಮನೆಯವರನ್ನು ನಾಯಕರು, ಕುರುಬರು, ಗೊಲ್ಲರು ನಿಮಗೆ ಸಾಮಾಜಿಕವಾಗಿ ಕಳಸ್ತರದಲ್ಲಿ ಕಾಣುವುದಿಲ್ಲ ಎಂದಾಗ ಇದಕ್ಕೆ ಅವರು "ಇಲ್ಲ ಸಾರ್ ಮೊದಲು ೩೦ ಅಥವಾ ೪೦ ವರ್ಷಗಳ ಹಿಂದೆ. ನಮ್ಮನ್ನು ಅವರು ಕೀಳಾಗಿ ಕಾಣುತ್ತಿದ್ದರು. ಈಗ ಆದೆಲ್ಲಾ ಹೋಗಿದೆ. ನಮ್ಮ ಮನೆಗಳಿಗೆ ಅವರು ಬರುತ್ತಾರೆ. ಮತ್ತು ನಾವು ಅವರ ಮನೆಗಳಿಗೆ ಹೋಗುತ್ತೇವೆ, ಯಾವ ಅಡ್ಡಿಆತಂಕವಿಲ್ಲ" ಎಂದರು. ಹೀಗೆ ಬಳ್ಳಾರಿ ಜಿಲ್ಲೆಯಲ್ಲಿ ವಾಸ ಮಾಡುವ ಡೊಂಬರ ಸಮುದಾಯಕ್ಕೆ ಸಾಮಾಜಿಕ ಸ್ಥಾನಮಾನದ ಕೊರತೆಯಿದ್ದರೂ, ಅದು ಹಿಂದುಳಿದ ಜಾತಿ ಸಮುದಾಯಗಳು ಇವರ ಜೊತೆ ಯಾವ ಮಡಿವಂತಿಕೆಗಳಿಲ್ಲದೆ ಬೆರೆಯುತ್ತಿವೆ. ಕೆಲವೊಮ್ಮೆ ಈ ಸಮುದಾಯದವರೇ ತಮ್ಮ ಮನಸ್ಥಿತಿಯಲ್ಲಿ ನಮ್ಮ ಡೊಂಬರು ಸಮುದಾಯವು ಕೀಳೇನೋ ಎಂಬ ಭಾವನೆಯನ್ನು ಸಹ ಕೆಲವರು ಹೊಂದಿದ್ದಾರೆ. ಆದ್ದರಿಂದ ನಿಮಗೆ ಡೊಂಬರಾಟದ ಬಗ್ಗೆ ಗೊತ್ತೇ ಎಂದು ಕೇಳಿದರೆ "ಸಾರ್, ದಯವಿಟ್ಟು ಆ ಪ್ರಶ್ನೆಯನ್ನು ಮಾತ್ರ ಕೇಳಬೇಡಿ. ಆ ವೃತ್ತಿಯೆಂದಲೆ ನಮಗೆ ಕೀಳೆಂಬ ಪಟ್ಟ ಕಟ್ಟಿದ್ದಾರೆ. ಅಲ್ಲದೆ ಆ ವೃತ್ತಿಯನ್ನು ಈಗ ಯಾರೂ ಎಲ್ಲೂ ಮಾಡುವುದಿಲ್ಲ" ಎನ್ನುವಂತಹ ಉತ್ತರ ಅವರಿಂದ ಬರುತ್ತದೆ.

ಬೂದುಗುಪ್ಪದಲ್ಲಿಯೂ ಸಹ ಸಾಮಾಜಿಕವಾಗಿ ಯಾವ ತೊಂದರೆಯನ್ನು ಇವರು ಅನುಭವಿಸುತ್ತಿಲ್ಲ.

ದೇವಸ್ಥಾನಗಳ ಒಳಗಡೆ ಪ್ರವೇಶವಿದೆ. ಸಾರ್ವಜನಿಕ ಕೆರೆ, ಹೋಟೆಲ್‌ಗಳ ಕುರಿತಂತೆ, ಯಾವುದರ ನಿರ್ಬಂಧನೆ ಇಲ್ಲದೆ ಈಗ ಎಲ್ಲಾವೂ ಬದಲಾವಣೆಯಾಗಿದೆ. ಮಾದಿಗ, ಹೊಲೆಯರನ್ನು ಕಂಡಂತೆ ನಮ್ಮನ್ನು ಈಗ ಯಾರು ಕಾಣುವುದಿಲ್ಲ. ಡೊಂಬರು ಬೂದುಗುಪ್ಪದಲ್ಲಿ ನಾಟಕ ಆಡುತ್ತಾರಂತೆ. ನಾವು ಕ್ಷೇತ್ರಕಾರ್ಯಕ್ಕೆ ಹೋದಂತಹ ಸಂದರ್ಭದಲ್ಲಿ ಡೊಂಬರ ಒಂದು ಕುಟುಂಬದಲ್ಲಿ ಒಬ್ಬ ಮನುಷ್ಯ ಬೈಲಾಟದಲ್ಲಿ ಒಂದು ಪಾತ್ರ ಮಾಡಿದ್ದನ್ನು ಕೇಳಿದ. ಅದೇ ಕುಟುಂಬದ ಸದಸ್ಯರು ನನಗೆ ತಿಳಿಸಿದರು. ಆಗ ನನ್ನ ಗಮನಕ್ಕೆ ಬಂದ ವಿಚಾರವೆಂದರೆ ಆ ಬೈಲಾಟದ ಪಾತ್ರಧಾರಿಗಳು ಎಲ್ಲರು ನಿಮ್ಮ ಸಮುದಾಯದವರೆ ಎಂದು ಪ್ರಶ್ನೆ ಮಾಡಿದೆ. ಇಲ್ಲಾ ಸಾರ್, ಅದರಲ್ಲಿ ನಾಯಕರು, ಕುರುಬರು, ಡೊಂಬರು, ಉಪ್ಪಾರರು, ಅಗಸರು ಹೀಗೆ ಮುಂತಾದ ಜಾತಿಯ ಸಮುದಾಯಗಳ ವ್ಯಕ್ತಿಗಳು ಸೇರಿಕೊಂಡು ಪಾತ್ರಗಳನ್ನು ಆರಿಸಿಕೊಂಡು ಪಾತ್ರಕ್ಕೆ ತಕ್ಕಂತೆ ಹಣದ ಪಟ್ಟಿಯನ್ನು ವಸೂಲಿ ಮಾಡುತ್ತಾರೆ ಎಂದರು. ಅಂದರೆ ಇವರಿಗೆ ಸಾಮಾಜಿಕವಾಗಿ, ಮೇಲುಜಾತಿಗಳೊಡನೆ, ಬೆರೆತು, ಹೋಗುವಂತರಾಗಿದ್ದಾರೆ.

### ಡೊಂಬರು ಮತ್ತು ದೇವದಾಸಿ ಪದ್ಧತಿ

ಹಿಂದೆ ಪ್ರತಿಯೊಂದು ಕೆಳಜಾತಿಗಳಲ್ಲಿ ದೇವದಾಸಿ ಪದ್ಧತಿಯೆಂಬುದು ವ್ಯಾಪಿಸಿಕೊಂಡು ಬಿಟ್ಟಿದೆ. ಹಾಗೆ, ಡೊಂಬರು ಸಮುದಾಯವು ಇದಕ್ಕೆ ಹೊರತಾಗಿಯೇನು ಇಲ್ಲ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಡೊಂಬರ ಸಮುದಾಯದ ಹಲವರು 'ಸಾರ್ ನಮ್ಮ ಸಮುದಾಯದಲ್ಲಿ ಹಿಂದಕ್ಕೆ ದೇವದಾಸಿಗೆ ಬಿಡುವ ಪದ್ಧತಿ ಇತ್ತು. ಈ ಪದ್ಧತಿ, ನಮ್ಮ ಅಜ್ಜಿ ಮತ್ತು ತಾಯಿಯ ಕಾಲದಲ್ಲೂ ಇತ್ತು. ಆದರೆ, ನಮಗೆ ತಿಳುವಳಿಕೆ ಬಂದಾಗಿನಿಂದ, ನಮ್ಮ ಹೆಣ್ಣುಮಕ್ಕಳು ದೇವದಾಸಿರಾದರೆ ನಮಗೆ ಸಾಮಾಜಿಕ ಸ್ಥಾನಮಾನಗಳು ಕಡಿಮೆಯಾಗುತ್ತವೆ ಅನ್ನುವಂತ ಪ್ರಜ್ಞೆಗೆ ಬಂದಾಗಿನಿಂದ, ಈ ಅನಿಷ್ಠ ಪದ್ಧತಿಯನ್ನು ದೂರ ಮಾಡಿದ್ದೇವೆ' ಎನ್ನುತ್ತಾರೆ. ಹಾಗೆಯೇ ನಾನು ದಾಖಲೆ ಮಾಡಿಕೊಳ್ಳುವಾಗ ಸೂಕ್ಷ್ಮವಾಗಿ ಅವಲೋಕನ ಮಾಡಿದೆ. ಪ್ರಸ್ತುತ ಯಾವ ಯುವತಿಯರನ್ನು ಸಹ ದೇವದಾಸಿಗೆ ಬಿಟ್ಟಿರುವಂತಹ ಪ್ರಸಂಗಗಳು ನನ್ನ ಗಮನಕ್ಕೆ ಬರಲಿಲ್ಲ. ಇತ್ತೀಚೆಗೆ ಪ್ರತಿ ಕೆಳಜಾತಿಯ ಸಮುದಾಯಗಳಲ್ಲಿ ಈ ಪದ್ಧತಿ ಇಳಿಮುಖವಾಗುತ್ತಲೇ ಸಾಗಿದೆ.

### ಡೊಂಬರು ಎದುರಿಸುತ್ತಿರುವ ಸಮಸ್ಯೆಗಳು

ಡೊಂಬರು ಇಂದು ಸಹ ಅನೇಕ ಸಮಸ್ಯೆಗಳನ್ನು ಎದರಿಸುತ್ತಿದ್ದಾರೆ. ಸರಕಾರದ ಸೌಲಭ್ಯಗಳು ಅವರಿಗೆ ತಲುಪುತ್ತಿಲ್ಲ. ಅಲ್ಲದೆ ಅವರು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿದ್ದರೂ ಸಹ ಸಮುದಾಯದ ಜನಸಂಖ್ಯೆವಾರು ಮೀಸಲಾತಿಯನ್ನು ಪ್ರತ್ಯೇಕವಾಗಿ ಕಲ್ಪಿಸಿಕೊಟ್ಟರೆ ನಮ್ಮ ಸಮುದಾಯಕ್ಕೆ ಸರ್ಕಾರದಿಂದ

ಬರುವ ಅನೇಕ ಸೌಲಭ್ಯಗಳ ನಮ್ಮ ಸಮುದಾಯದ ಪಾಲಿಗೆ ಸಿಗುತ್ತವೆ ಎನ್ನುತ್ತಾರೆ. ಅಲ್ಲದೆ, ಇಂದು ಪರಿಶಿಷ್ಠ ಜಾತಿಯಲ್ಲಿ ಬರುವ ಲಂಬಾಣಿಗಳು, ಹೊಲೆಯರು, ಮಾದಿಗರು, ವಡ್ಡರು ಹೀಗೆ ಮುಂತಾದವರು ಎಲ್ಲಾ ಸೌಲಭ್ಯಗಳನ್ನು ತಾವೇ ಬಳಸಿಕೊಳ್ಳುತ್ತಿದ್ದಾರೆ. ಉದಾ. ರಾಜಕೀಯಕ್ಕೆ ಸಂಬಂಧಿಸಿದಂತೆ, ಉದ್ಯೋಗದ ವಿಷಯ ಕುರಿತಂತೆ, ತಾಂತ್ರಿಕ ಮತ್ತು ವೃತ್ತಿ ಕೋರ್ಸ್‌ಗಳಲ್ಲಿ ಅವರೊಡನೆ, ನಮ್ಮ ಸಮುದಾಯ ಪೈಪೋಟಿ ಮಾಡುವುದು ಕಷ್ಟಕರದ ಸಂಗತಿಯೇ ಆಗಿದೆ. ಅಲ್ಲದೆ, ನಮ್ಮ ಸಮುದಾಯದಲ್ಲಿ ಇತ್ತೀಚಿಗಷ್ಟೇ ವಿದ್ಯಾಭ್ಯಾಸವನ್ನು ಕಲಿಯಲು ಆರಂಭಿಸಿದ್ದಾರೆ. ಇಂಥವರು ಮನಸ್ಸಿನಲ್ಲಿ ಮುಂದೆ ನಾವು ಇತರರೊಡನೆ ಶೈಕ್ಷಣಿಕವಾಗಿ ಅವಕಾಶಗಳನ್ನು ಪಡೆಯುವುದು ತುಂಬಾ ಕಷ್ಟದ ಎಂಬ ಭಾವನೆ ಬೆಳೆದಿವೆ. ಇವರು ದಿನನಿತ್ಯ ಶಾಲೆಗೆ ಹೋಗುವುದೇ ಕಷ್ಟಕರವಾಗಿರುವುದಾಗಿ, ಇಂಥ ಪರಿಸ್ಥಿತಿಯಲ್ಲಿ ಉತ್ತೀರ್ಣರಾದವರೇ ರ್‍ಯಾಂಕ್ ಪಡೆದಂತೆ ಆಗಿರುತ್ತದೆ. ಇಂದಿನ ಸರಕಾರವು ಅನುಸರಿಸುತ್ತಿರುವ ಏಕಮುಖದ ಅಭಿವೃದ್ಧಿ ನಮಗೆ, ಬೇಸರವಾಗಿದೆ ಎನ್ನುವಂಥ ಮಾತನ್ನು ಆಡುತ್ತಾರೆ. ಮತ್ತೆ ಕೆಲವರು ನಮ್ಮ ಮಕ್ಕಳು ಓದು ಕಲಿತು, ಉದ್ಯೋಗ ತರುವುದಂತೂ ಕನಸಿನ ಮಾತಾಗಿದೆ. ಆದುದರಿಂದ, ಓದು ಕಲಿಸುವುದಕ್ಕಿಂತ ಕೂಲಿಗೆ ಲೇಸು ಎನ್ನುತ್ತಾರೆ.

ರಾಜಕೀಯ ಸಮಸ್ಯೆಗೆ ಸಂಬಂಧಿಸಿದಂತೆ, ನನ್ನ ಕ್ಷೇತ್ರಕಾರ್ಯಧಾರಿತ ಮಾಹಿತಿ ಪ್ರಕಾರ ಇಡೀ ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ, ನನ್ನ ನಿಖರವಾದ ದಾಖಲಾತಿಯ ಪ್ರಕಾರ ಕಮಲಾಪುರದಲ್ಲಿ ಒಬ್ಬರು ಒಂದು ಬಾರಿಗೆ ಮಾತ್ರ ಪಟ್ಟಣ ಪಂಚಾಯಿತಿ ಅಧ್ಯಕ್ಷರಾಗಿದ್ದಾರೆ. ಮತ್ತು ಕೂಡ್ಲಿಗಿಯಲ್ಲಿ ಒಬ್ಬ ಮಹಿಳೆ ಪುರುಸಭೆಯ ಸದಸ್ಯರಾಗಿದ್ದಾರೆ. ಹೀಗೆ ಬಳ್ಳಾರಿಯಲ್ಲಿ ಒಬ್ಬ ಮಹಿಳೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳಾ ಕಾಂಗ್ರೆಸ್ ಕಮಿಟಿ ಜಿಲ್ಲಾ ಪ್ರಧಾನ ಕಾರ್ಯದರ್ಶಿಯೂ ಮುಂದುವರೆಯುತ್ತಿದ್ದಾರೆ.

ಈ ಮೇಲಿನ ನಾಲ್ಕು ಐದು ವ್ಯಕ್ತಿಗಳನ್ನು ಬಿಟ್ಟರೆ ಉಳಿದ ಡೊಂಬರ ಸಮುದಾಯದಲ್ಲಿ ಯಾರಿಗೂ ರಾಜಕೀಯ ಪ್ರವೇಶದ ಅವಕಾಶ ಸಿಕ್ಕಿಲ್ಲ. ಡೊಂಬರು ಅಧಿಕ ಸಂಖ್ಯೆಯಲ್ಲಿರುವ ಊರುಗಳಾದ ಕರ್ನಾರಹಟ್ಟೆ, ಮರಬನಹಳ್ಳಿ, ಸೋವೆನಹಳ್ಳಿ, ದಿಬ್ಬದಹಳ್ಳಿ ಮುಂತಾದ ಗ್ರಾಮಗಳಲ್ಲಿ ಇದುವರೆಗೂ ಯಾರೊಬ್ಬರು ಗ್ರಾಮಪಂಚಾಯತಿ ಸದಸ್ಯರು ಆಗಿಲ್ಲವಂತೆ. ಇದಕ್ಕೆ ಕಾರಣ ಪರಿಶಿಷ್ಟ ಜಾತಿಯ ರಿಜರ್ವೆಸನ್ ಕೋಟಾದಲ್ಲಿ ಲಂಬಾಣಿಗರು, ಹೊಲೆಯರು, ಮಾದಿಗರು, ವಡ್ಡರೂ ಈ ಸಮುದಾಯದವರೇ ಪ್ರತಿಸಾರಿ ಆರಿಸಿ ಬರುತ್ತಾರೆ. ನಮಗೆ ಒಂದು ಬಾರಿಯಾದರೂ, ಅವಕಾಶ ಸಿಕ್ಕಿಲ್ಲವೆನ್ನುತ್ತಾರೆ. ಅಲ್ಲದೆ, ನಮ್ಮ ಸಮುದಾಯದಲ್ಲಿ ರಾಜಕೀಯ ಪ್ರಜ್ಞೆ ಕಡಿಮೆಯಿದೆ. ಇದಕ್ಕೆ ಕಾರಣ ನಮ್ಮಲ್ಲಿ ವಿದ್ಯಾವಂತರ ಸಂಖ್ಯೆ ಕಡಿಮೆ ಇದೆ ಎನ್ನುವ ಭಾವನೆ ಇವರಲ್ಲಿದೆ. ಜನಸಂಖ್ಯಾವಾರು ರಾಜಕೀಯ ಮೀಸಲಾತಿ ಕಲ್ಪಿಸಿಕೊಡುವುದರಿಂದ ಪ್ರತಿಯೊಂದು ಸಮುದಾಯಗಳಿಗೆ ಯಾವ ಅನ್ಯಾಯವಾಗುವುದಿಲ್ಲ. ಇದರಿಂದ ರಾಜಕೀಯ, ಸಮಾನತೆ, ಸಾಧಿಸಿದಂತಾಗುತ್ತದೆ.

ಡೊಂಬರಿಗೆ ಉಳಿಮೆ ಮಾಡುವುದಕ್ಕೆ ಭೂಮಿಯಿಲ್ಲ. ಇದ್ದರೂ, ಇಡೀ ಜಿಲ್ಲೆಗೆ ಸಂಬಂಧಿಸಿದಂತೆ ಡೊಂಬರ ೫ ಅಥವಾ ೬ ಕುಟುಂಬಗಳು ಭೂಮಿಯಿದೆ. ಅದು ಅವರು ಹೊಂದಿರುವ (ಬೂದುಗುಪ್ಪದಲ್ಲಿ) ಅಧಿಕ ಭೂಮಿಯೆಂದರೆ ಒಂದು ಕುಟುಂಬದಲ್ಲಿ ೩೮ ಎಕರೆ ನೀರಾವರಿ, ೧೦ ಎಕರೆ ಒಣ ಭೂಮಿ ಮತ್ತು ಒಂದು ಟ್ರಾಕ್ಟರ್ ಇದೆ. ಎರಡನೆಯದಾಗಿ ಕೂಡ್ಲಿಗಿಯ ಒಂದು ಕುಟುಂಬಕ್ಕೆ ೩೦ ಎಕರೆ ಭೂಮಿಯಿದೆ. ಇದರಲ್ಲಿ ೧೩ ಎಕರೆ ನೀರಾವರಿ ಉಳಿದ ೧೭ ಎಕರೆ ಒಣಭೂಮಿಯಿದೆ. ಇವರಿಗೆ ಸಹ ಟ್ರಾಕ್ಟರ್ ಇದೆ. ಮತ್ತು ೧೦ ಎಮ್ಮೆಗಳನ್ನು ಕಟ್ಟಿ ಹಾಲು ಮಾರುತ್ತಾರೆ. ದಿಬ್ಬದಹಳ್ಳಿಯಲ್ಲಿ ಒಂದು ಕುಟುಂಬಕ್ಕೆ ೨೦ ಎಕರೆ ಇದರಲ್ಲಿ ೫ ಎಕರೆ, ಪಂಪ್‌ಸೆಟ್ ಉಳಿದ ೧೫ ಎಕರೆ ಒಣಭೂಮಿ ಇದನ್ನು ಬಿಟ್ಟರೆ ಹತ್ತು ಕುಟುಂಬಗಳಿಗೆ ೩ ಎಕರೆಗಿಂತ ಇನ್ನು ಅತಿಕಡಿಮೆ ಭೂಮಿ ಇದೆ. ಇವರು ಎತ್ತುಗಳನ್ನು ಕಟ್ಟಿ ಬೇಸಾಯ ಮಾಡುತ್ತಾರೆ. ತಮ್ಮ ಭೂಮಿಯ ಜೊತೆಗೆ, ಇತರೆ, ಬೇರೆಯವರ ಭೂಮಿಯನ್ನು ಗೇಣಿಗೆ ಮಾಡಿಕೊಳ್ಳುತ್ತಾರೆ. ಇನ್ನುಳಿದಂತೆ ಸುಮಾರು ೭೦ ರಷ್ಟು ಕುಟುಂಬಗಳಿಗೆ ಭೂಮಿಯೇ ಇಲ್ಲ. ಇದುವರೆಗೂ ಇವರಿಗೆ ಸರಕಾರವು ಸಹ, ಭೂಮಿಯನ್ನು ಹಂಚಿಲ್ಲವೆಂದು ಹೇಳುತ್ತಾರೆ. ಇವರಿಗೆ ಬೇಸಾದಲ್ಲಿ ಆಸಕ್ತಿಯಿದೆ. ಆದರೆ, ಭೂಮಿಯ ಕೊರತೆ ಇರುವುದರಿಂದ ಬಡತನ ಸಮಸ್ಯೆ, ಇವರು ದುಡಿಯುವ ದಿನನಿತ್ಯದ ಕೂಲಿಗೆ ಒಂದು ಕೆ.ಜಿ. ಅಕ್ಕಿ ಸಹ ಬರುವುದಿಲ್ಲ. ಹಾಗಾದರೆ ಕಾಯಿಪಲ್ಲೆ ಖರೀದಿಸುವುದು ದೂರದ ಮಾತೇ ಆಗಿದೆ. ನಮ್ಮ ದೇಶದ ಆರ್ಥಿಕ ನೀತಿಯೇ ಹೀಗಿದೆ. ಇಲ್ಲಿ ಬಡವರು ಇನ್ನೂ ಬಡವರಾಗುತ್ತಿದ್ದಾರೆ. ಶ್ರೀಮತರು ಇನ್ನು ಶ್ರೀಮಂತರಾಗುತ್ತಿದಾರೆ. ಇದು ನಮ್ಮ ದೇಶದ ಸನಾತನ ದುರಂತವೇ ಸರಿ.

**ಜಾತಿಪ್ರಮಾಣ ಪತ್ರದ ಸಮಸ್ಯೆ**

ಹೀಗೆ ನಾನು ಕೂಡ್ಲಿಗೆ ಕ್ಷೇತ್ರಕಾರ್ಯಕ್ಕಾಗಿ ಹೋದಾಗ ಅವರಿಂದ ಸಾಧ್ಯವಾದಷ್ಟು ಮಾಹಿತಿಯನ್ನು ಪಡೆದೆ. ಕೂಡ್ಲಿಗಿಯಲ್ಲಿ ಆರಂಭದಲ್ಲಿ ಜಾತಿಪ್ರಮಾಣ ಪತ್ರ ಕೊಡಲು ತಕರಾರು ಮಾಡಿದರು. ಜಾತಿ ಪ್ರಮಾಣ ಪತ್ರ ಕೊಡುವುದಕ್ಕೆ ಸುಮಾರು ೧೦ ವರ್ಷದ ಹಿಂದೆ ಆನಂತರ ಅಲ್ಲಿನ ತಹಶಿಲ್ದಾರರು ಖಚಿತ ಪಡಿಸಿಕೊಂಡು ಈಗ ಯಾವ ತಕರಾರು ಮಾಡದಂತೆ, ಜಾತಿ ಪ್ರಮಾಣ ಪತ್ರ ನೀಡುತ್ತಾರೆ.

ಇಂತದೇ ಸಮಸ್ಯೆ ಹೊಸಪೇಟೆ ತಾಲೂಕಿನಲ್ಲಿಯೂ ಕಮಲಾಪುರದ ಡೊಂಬರು ಎದುರಿಸಿದ್ದಾರೆ. ಕೊನೆಗೆ, ದೊಡ್ಡ ದೊಡ್ಡ ಶಿಫಾರಸ್ಸುಗಳ ಮೂಲಕ ಜಾತಿ ಪ್ರಮಾಣಪತ್ರವನ್ನು ಪಡೆದುಕೊಂಡಿದ್ದಾರೆ. ಇಲ್ಲಿನ ತಹಶೀಲ್ದಾರರು ಒಬ್ಬಾತನಿಗೆ ಡೊಂಬರು ಎಂದರೆ ಗೊತ್ತೇ ಇರಲಿಲ್ಲವಂತೆ. ಇಂತವರು ಕೂಡ ಒಬ್ಬ ತಾಲೂಕಿಗೆ ತಹಶೀಲ್ದಾರರಾಗಿ ಬರುವ ದುರಂತ ಭಾರತದಲ್ಲಿ ಮಾತ್ರ ಸಾಧ್ಯ. ಕೂಡ್ಲಿಗಿಯಿಂದ ಪದ್ಮಯೆನ್ನುವವರನ್ನು ದಾವಣಗೆರೆಗೆ ವಿವಾಹ ಮಾಡಿಕೊಟ್ಟಿದ್ದರು. ಆ ಸಂದರ್ಭದಲ್ಲಿ ದಾವಣಗೆರೆ

ಬಳ್ಳಾರಿ ಜಿಲ್ಲೆಯ ಒಂದು ತಾಲೂಕು ಮಾತ್ರ ಆಗಿತ್ತು. ಪದ್ಮಯೆಂಬುವರು ಹತ್ತನೆ ತರಗತಿ ಓದಿಕೊಂಡಿದ್ದಾರೆ. ಅಂಗನವಾಡಿ ಶಿಕ್ಷಕಿ, ಉದ್ಯೋಗದ ಸಲುವಾಗಿ ಅರ್ಜಿ ಹಾಕುವುದಕ್ಕೆ ಜಾತಿ ಪ್ರಮಾಣ ಪತ್ರ ಲಗತ್ತಿಸಬೇಕಾಗಿತ್ತು. ಈ ಕಾರಣದಿಂದಾಗಿ ಇವಳು ಜಾತಿ ಪ್ರಮಾಣ ಪತ್ರ ಪಡೆಯಲು ದಾವಣಗೆರಿ ತಾಲೂಕು ಕಛೇರಿಗೆ ಹೋಗಿ ಜಾತಿ ಪ್ರಮಾಣಪತ್ರ ತುಂಬುವಾಗ ಯಾವ ಜಾತಿಯೆಂಬ ಕಾಲಂನಲ್ಲಿ ಹಿಂದೂ ಡೊಂಬರು ಎಂದು ನಮೂದಿಸಿದ್ದರಂತೆ. ಇದಕ್ಕೆ ಅಲ್ಲಿನ ತಾಹಶಿಲ್ದಾರರು ನೀವು ಪರಿಶಿಷ್ಟ ಜಾತಿಯಲ್ಲಿ ಬರುವುದಿಲ್ಲ. ಅಲ್ಲದೆ ಹಿಂದೂ ಡೊಂಬರು ಎಂಬ ಜಾತಿ ಕರ್ನಾಟಕದಲ್ಲಿಯೇ ಇಲ್ಲ. ಆದ್ದರಿಂದ ನಿಮಗೆ ಜಾತಿ ಪ್ರಮಾಣ ಪತ್ರವನ್ನು ಕೊಡಲು ಬರುವುದಿಲ್ಲವೆಂದು ಅನರ್ಹಗೊಳಿಸಿದರಂತೆ. ಇದಕ್ಕೆ ಅವರು ನಾವು ಹೇಗಾದರೂ ಮಾಡಿ ನಮ್ಮ ಜಾತಿಯ ಪ್ರಮಾಣ ಪತ್ರವನ್ನು ಪಡೆಯಬೇಕು ಎಂಬ ಧೃಡನಿರ್ಧಾರ ಮಾಡಿ, ಹತ್ತು ಹಲವು ಸಾರಿ ತಾಲೂಕು ಕಛೇರಿಗೆ ಮತ್ತು ಮನೆಗೆ ಅಲೆದಾಡಿದರೂ ಇದರಿಂದ ಯಾವ ಪ್ರಯೋಜನ ಆಗಲಿಲ್ಲವಂತೆ. ಕೊನೆಗೆ, ನ್ಯಾಯಾಂಗದ ಮೊರೆ ಹೋಗಿ ಅಲ್ಲಿಗೆ ಸುಮಾರು ದಿನಗಳ ನಂತರ ದಾವಣಗೆರೆ ನ್ಯಾಯಾಲಯದಲ್ಲಿ ಪರಿಶೀಲನೆ ಮಾಡುವುದಕ್ಕಾಗಿ ಬಳ್ಳಾಯಿಂದ ಜಾತಿ ಗೆಜೆಟಿಯರ್ ಅನ್ನು ತರಿಸಿ, ನೋಡಿದಾಗಲೂ ಸಹ ಅಲ್ಲಿನ ಅಧಿಕಾರಿಗಳು ಸ್ವಲ್ಪ ಗೊಂದಲಕ್ಕೆ ಈಡಾಗಿ, ತದನಂತರ ಪದ್ಮಾಯೆಂಬುವರನ್ನು ನ್ಯಾಯಲಯದ ಕಟುಕಟೆಯ ಮಧ್ಯೆ ಕರೆಯಿಸಿ ಅದರಿಂದ ಪ್ರಮಾಣ ಮಾಡಿಸಿ, ಕೊನೆಗೆ ಜಾತಿ ಪ್ರಮಾಣ ಪತ್ರ ಕೊಡುವಂತೆ ಆದೇಶ ಮಾಡಿದರಂತೆ. ಹೀಗೆ, ಸರಕಾರದವರು ಮಾಡುವ ಗೊಂದಲದಿಂದಾಗಿ, ನಾವು ಡೊಂಬರ ಜಾತಿಯಲ್ಲಿಯೇ ಹುಟ್ಟಿದವರಾಗಿದ್ದರು. ನಮ್ಮನ್ನು ಸರಕಾರವು ಈಗಲೂ ಕಡೆಗಣಿಸುತ್ತಾ ಬಂದಿದೆಯೆಂದು ಹೇಳುತ್ತಾರೆ.

ಅವರು ತಮ್ಮ ಮೂಲ ವೃತ್ತಿ ಬೇಸಾಯವೆಂದು ಹೇಳುತ್ತಾರೆ. ಇದಕ್ಕೆ ಆಧಾರ ಭೂಮಿ, ಎತ್ತು, ಕುರಿ ಸಾಕಾಣಿಕೆ, ಕೃಷಿ ಕೂಲಿ ಮಾಡುವುದಾಗಿ ಹೇಳುತ್ತಾರೆ. ಕೂಲಿ ಬೇಸಾಯದ ಜೊತೆಗೆ ಇತರೆ ಕೈಕಸಬುಗಳಾದ ಕರಕುಶಲ ಕಲೆಯಾಗಲಿ, ಪ್ರದರ್ಶನಾತ್ಮಕ ವೃತ್ತಿಯಂಥ ಕಸುಬು ಏನಾದರೂ ಮಾಡುತ್ತೀರು ವಿರಾ ಎಂದು ಪ್ರಶ್ನೆ ಮಾಡಿದರೆ ಆ ವೃತ್ತಿಗಳು ಪರಿಚಯವೇ ನಮಗೆ ಗೊತ್ತಿಲ್ಲ. ಬೇಕಾದರೆ ಯರಬಳ್ಳಿಯಲ್ಲಿ ನಮ್ಮ ಸಮುದಾಯದವರು ಬಸಣ್ಣ, ಮೂರ್ತಿಯನ್ನು ತಯಾರಿಸುವ, ವೃತ್ತಿಯನ್ನು ಈಗಲೂ, ಕೆಲವರು ಮಾಡುತ್ತಿದ್ದಾರೆ. ಆದರೆ ನಮ್ಮ ಭಾಗದಲ್ಲಿ ಅಂಥಾವು ಯಾವು ಇಲ್ಲ. ಮೇಲುಗಡೆಗೆ ಹೋದಂತೆ ತಮ್ಮ ಸಮುದಾಯದವರು ಈಗಲೂ, ಕೆಲವರು ಬಾಡಿಗೆಗೆ ಏರುಪಿನ್ನು, ಪೌಡರು ಮುಂತಾದ ಸಾಮಾನುಗಳನ್ನು ಮಾರುತ್ತಾರೆ. ಹೀಗೆಯೇ ಮರಬನಹಳ್ಳಿಯಲ್ಲಿ ಎರಡು ಕುಟುಂಬದವರು ಇದೇ ವೃತ್ತಿಯನ್ನು ಮಾಡುತ್ತಿದ್ದಾರೆ. ಮತ್ತೆ ಕೆಲವರು ಹಂದಿಗಳನ್ನು ಸಾಕುತ್ತಿದ್ದಾರೆ.

ನಮ್ಮ ಸಮುದಾಯದವರು ಈ ಭಾಗದಲ್ಲಿ ಜೀವನಾಧಾರವಾಗಿ ಕುರಿಗಳನ್ನು ಸಾಕಿಕೊಂಡಿದ್ದಾರೆ.

ಅಲ್ಲದೆ, ಈ ಕುರಿಗಳಿಂದ ಬಂದ ಆದಾಯದಿಂದ ಭೂಮಿಯನ್ನು ಖರೀದಿಸುವುದಕ್ಕೆ ಸಹಕಾರಿಯಾಗಿದೆ. ಈಗಲೂ, ಒಂದು ಕುಟುಂಬದಲ್ಲಿ ೫೦ ಕುರಿಗಳಿವೆ. ಬೂದುಗುಪ್ಪದಲ್ಲಿ ಡೊಂಬರು ಒಂದು ಕುಟಂಬದಲ್ಲಿ ೫೦ ಕರೆ ಜಮೀನು ಇದೆ. ಇದರಲ್ಲಿ ೨೦ ಎಕರೆ ನೀರಾವರಿ ಉಳಿದ ೩೦ ಎಕರೆ ಒಣಭೂಮಿಯಾಗಿದೆ. ಅಲ್ಲದೆ, ಟ್ರಾಕ್ಟರಿಯನ್ನು ಸಹ ಹೊಂದಿದ್ದಾರೆ. ಮತ್ತೆರಡು ಕುಟುಂಬಗಳಲ್ಲಿ ತಲಾ ೧೫, ೧೬ ಎಕರೆ ಭೂಮಿಯನ್ನು ಹೊಂದಿದ್ದಾರೆ. ಉಳಿದ ಕೆಲವು ಕುಟುಂಬಗಳಲ್ಲಿ ತಲಾ ೨.೫೦, ೧.೪೦ ಹೀಗೆ ನೀರಾವರಿ ಭೂಮಿಯನ್ನು ಹೊಂದಿದ್ದಾರೆ.

ಮೇಲಿನ ಯಾವು ಇಲ್ಲದೆ ಕೆಲವು ಕುಟುಂಬಗಳೂ ಇವೆ. ಇಂಥವರು ಭೂಮಾಲಿಕರ ಹೊಲಗದ್ದೆಗಳಲ್ಲಿ ಕೂಲಿಯ ಕೆಲಸಕ್ಕೆ ಹೋಗುತ್ತಾರೆ. ಇವರು ದಿನಾಲು ದುಡಿಯಬೇಕು ಊಟ ಮಾಡಬೇಕು. ದುಡಿಯದಿದ್ದರೆ ನಮಗೆ ಅಂದಿನ ಊಟಕ್ಕೆ ತುಂಬ ತೊಂದರೆಯಾಗುತ್ತದೆ. ಈ ತೊಂದರೆ ಹೋಗಲಾಡಿಸಲು ಸಾಲ ಮಾಡಬೇಕಾಗುತ್ತದೆ ಎನ್ನುತ್ತಾರೆ. ಇಡೀ ವರ್ಷಪೂರ್ತಿ ದುಡಿಯಲು ಕೆಲಸವಿರುವುದಿಲ್ಲ. ಹಾಗಾಗಿ ಪಕ್ಕದ ಹಳ್ಳಿಗಳಿಗೆ ಮತ್ತು ಹತ್ತಿರದ ನಗರಗಳಿಗೆ ಹೋಗಿ ಕೂಲಿ ಕೆಲಸ ಮಾಡಿ ಹಿಂದಿರುಗುತ್ತಾರೆ.

ಶಿಕ್ಷಣಕ್ಕೆ ಸಂಬಂಧಿಸಿದಂತೆ, ಈ ಭಾಗದಲ್ಲಿ ಇತ್ತೀಚಿನ ಯುವ ಪೀಳಿಗೆ ಮತ್ತು ಮಕ್ಕಳೂ ಸೇರಿದಂತೆ ವಿದ್ಯಾಭ್ಯಾಸವನ್ನು ಮಾಡುತ್ತಿದ್ದಾರೆ. ನಾವು ಮತ್ತು ನಮ್ಮ ಹಿರಿಯರು ಯಾರು ವಿದ್ಯಾಭ್ಯಾಸವನ್ನೇ ಮಾಡಿಲ್ಲ, ಅನಕ್ಷರಸ್ಥರಾಗಿದ್ದೇವೆ ಎನ್ನುತ್ತಾರೆ. ನಮಗೆ ರಾಜಕೀಯ ಪ್ರಜ್ಞೆ ಮತ್ತು ರಾಜಕೀಯದಲ್ಲಿ ಅಭಿರುಚಿ ಬಹಳ ಕಡಿಮೆ ಇದೆ. ಇದುವರೆಗೂ ಸಮುದಾಯದ ಯಾರೊಬ್ಬರೂ ಗ್ರಾಮಪಂಚಾಯತಿ ಸದಸ್ಯರಾಗಿಲ್ಲ. ಅಲ್ಲದೆ ಯಾವ ರಾಜಕೀಯ ಪಕ್ಷದಲ್ಲಿ ಸದಸ್ಯತ್ವವನ್ನು ಹೊಂದಿಲ್ಲ ಎನ್ನುತ್ತಾರೆ. ಆ ಊರಿನಲ್ಲಿ ಡೊಂಬರ ಜನಸಂಖ್ಯೆ ಅಧಿಕವಾಗಿದೆ. ಜನಸಂಖ್ಯೆಗೆ ತಕ್ಕಂತೆ ಒಂದು ಸಾರಿಯಾದರೂ ಸದಸ್ಯರಾಗಬಹುದಾಗಿತ್ತು. ಆದರೆ ಗ್ರಾಮಪಂಚಾಯಿತಿಗೆ ಸದಸ್ಯರಾಗುವ ಅವಕಾಶ ನಮ್ಮ ಸಮುದಾಯಕ್ಕೆ ಅವಿರೋಧವಾಗಿ ಆಯ್ಕೆಯಾಗುವಂತೆ ಇತರೆ, ಪರಿಶಿಷ್ಟ ಜಾತಿಯ ಸಮುದಾಯಗಳು ನಮ್ಮ ಸಮುದಾಯಕ್ಕೆ ಕಳೆದ ಸಾರಿ ಅವಕಾಶ ಕಲ್ಪಿಸಿ ಕೊಟ್ಟಿದ್ದವು. ಆದರೆ, ನಮ್ಮ ಸಮುದಾಯದವರೇ ಬೇಡವೆಂದು ತಿರಸ್ಕಾರ ಮಾಡಿದರು. ಆದುದರಿಂದ, ಪರಿಶಿಷ್ಟ ಜಾತಿಯಲ್ಲಿಯೇ ಬೇರೆ ಸಮುದಾಯದವರು ಆಯ್ಕೆಯಾದರು ಎಂಬುದಾಗಿ ಇಲ್ಲಿನ ಜನ ತಿಳಿಸಿದರು.

ಡೊಂಬರ ಸಮುದಾಯದವರಲ್ಲಿ ಅನಕ್ಷರಸ್ಥರು ಅಧಿಕವಾಗಿರುವುದರಿಂದ ಸರಕಾರಿ ಸೌಲಭ್ಯಗಳನ್ನು ಪಡೆಯುವಲ್ಲಿ ವಿಫಲರಾಗಿದ್ದಾರೆ. ಉದಾ. ಬೂದುಗುಪ್ಪದಲ್ಲಿ ಇದುವರೆಗೂ ಯಾವೊಬ್ಬ ಡೊಂಬ ಕುಟುಂಬದವರಿಗೂ ಆಶ್ರಯ ಮನೆಗಳ ಸೌಲಭ್ಯ ಕಲ್ಪಿಸಿಲ್ಲ.

ಡೊಂಬರ ದೈವತ್ವದ ಬಗ್ಗೆ ಇರುವ ನಂಬಿಕೆಗಳು ಇತರೆ ತಳ ಸಮುದಾಯಗಳು ಪೂಜಿಸುವ ಹೆಣ್ಣು

ದೇವತೆಗಳನ್ನೇ ಇವರು ಪೂಜಿಸುತ್ತಿದ್ದಾರೆ. ಇದರಿಂದ ತಿಳಿದು ಬರುವುದೇನೆಂದರೆ ಈ ಸಮುದಾಯವು ಸಹ ತುಳಿತಕ್ಕೆ ಒಳಗಾದ ಸಮುದಾಯವೆಂದು ಇವರ ದೈವ ಆಚರಣೆಗಳು ತೋರಿಸಿಕೊಡುತ್ತವೆ. ಪುರಾಣ ಮತ್ತು ಮಹಾಕಾವ್ಯಗಳಲ್ಲಿ ಬ್ರಾಹ್ಮಣಗಳಲ್ಲಿ, ವೀರಶೈವಗಳಲ್ಲಿ ಆರಾಧಿಸುವ ದೈವಗಳೇ ಬೇರೆ. ಇತಿಹಾಸ ಕಾಲದಲ್ಲೂ ಸಹ, ಬುಡಕಟ್ಟಿನ ಆರಾಧನಾ ದೈವಗಳೆಂದರೆ, ಹೆಣ್ಣುದೇವತೆಗಳೇ ಆಗಿವೆ.

ಹೆಣ್ಣುದೇವತೆಗಳಾದ ರೇಣುಕಾ ಯಲ್ಲಮ್ಮ ಹುಲಿಗೆಮ್ಮ ಎಂಬ ದೇವರುಗಳ ಹೆಸರಿನಲ್ಲಿ ದಾರ ಕಟ್ಟುವುದು ಅಥವಾ ಬಸವಿಗೆ ಬೀಡುವ ಪದ್ಧತಿ ಅಥವಾ ದೇವದಾಸಿಗೆ ಬಿಡುವ ಪದ್ಧತಿಯನ್ನು ಕೆಳಜಾತಿಗಳು ಸಮುದಾಯಗಳು ಅನುಸರಿಸುತ್ತಿದ್ದವು. ಇದಕ್ಕೆ ಉತ್ತೇಜನ ಮೇಲು ಜಾತಿಯವರು ಕೊಡುತ್ತಿದ್ದರು. ಮತ್ತು ತಮ್ಮ ಮನೆ ಹೊಲಗದ್ದೆಗಳಲ್ಲಿ ಜೀತದಾಳುಗಳಂತೆ ದುಡಿಸಿಕೊಳ್ಳುತ್ತಿದ್ದರು. ಇದರಿಂದ ಅವರು ಭೋಗ ಜೀವನ ನಡೆಸುತ್ತಿದ್ದರು. ನಮ್ಮ ಹೆಣ್ಣುಮಕ್ಕಳನ್ನು ಭೋಗಿಸುವಾಗ ಯಾವ ಜಾತಿ ಭೇದ ಕಾಣುತ್ತಿರಲಿಲ್ಲ. ಬೇರೆ ಸಮಯ, ಅಥವಾ ಸಂದರ್ಭದಲ್ಲಿ ಅವರನ್ನು ಮುಟ್ಟಗೊಡದೆ, ಮೈಲಿಗೆ ಎನ್ನುವರು. ಅಲ್ಲದೆ, ತಮ್ಮ ಮನೆಯೊಳಗೆ ಹಾವು, ಚೇಳು ಬರುತ್ತವೆ ಎಂಬುದಾಗಿ ಮಂತ್ರೋಪದೇಶ ತಳಜಾತಿಯ ಸಮುದಾಯದವರಿಗೆ ಮಾಡುತ್ತಿದ್ದರು.

ಅಂದು ಯಲ್ಲಮ್ಮನ, ಹುಲಿಗೆಮ್ಮನ ಪೂಜಿಸುವ ಪ್ರತಿ ಕೆಳ ಸಮುದಾಯಗಳ ಪ್ರತಿ ಕುಟುಂಬಗಳಲ್ಲಿ ದೇವದಾಸಿಗಳು ಆಗಿರುತ್ತಿದ್ದರು. ಹೀಗೆ, ಡೊಂಬರ ಸಮುದಾಯದಲ್ಲಿ ಸಹ, ರೇಣುಕ ಯಲ್ಲಮ್ಮನ ಪೂಜೆ, ಹುಲಿಗೆಮ್ಮ ಹೆಣ್ಣು ದೇವತೆಗಳ ಪೂಜೆ ಮಾಡುತ್ತಾರೆ. ಇಂಥವರ ಪ್ರತಿ ಮನೆಗಳಲ್ಲಿ ದೇವದಾಸಿಗಳಾಗಿದ್ದಾರೆ. ಬಸವಿ ಈ ದೇವತೆಗಳನ್ನು ಆರಾಧಿಸುವವರು ಅರಿಕೆ ಮಾಡಿಕೊಳ್ಳುವುದು ಅರಿಕೆಯೆಂದರೆ ನನ್ನ ಒಬ್ಬ ಮಗಳನ್ನೆ ನಿನ್ನ ಹೆಸರಿನಲ್ಲಿ ದೇವದಾಸಿಯನ್ನಾಗಿ ನಿನಗೆ ಅರ್ಪಿಸುತ್ತೇನೆಂದು ತಮ್ಮ ಮನದಲ್ಲಿ ಅಂದುಕೊಳ್ಳುವರು. ತಮ್ಮ ಹುಡುಗಿಯ ವಯಸ್ಸಿಗೆ ಬಂದಾಗ, ಆ ದೇವಿಯ ಹೆಸರಿನಲ್ಲಿ ದೇವದಾಸಿಯನ್ನಾಗಿ ಮಾಡಿಬಿಡುತ್ತಾರೆ. ಇಂತ ಅನಿಷ್ಠ ಪದ್ಧತಿ ಇತ್ತೀಚೆಗೆ ಕಡಿಮೆಯಾಗುತ್ತಾ ಅಥವಾ ಇಳಿಮುಖವಾಗುತ್ತಾ ಬಂದಿದೆ. ಇದಕ್ಕೆ ಕೆಳ ಸಮುದಾಯಗಳಲ್ಲಿ (ವಿದ್ಯಾವಂತರು) ಬುದ್ಧಿವಂತ ರಾಗುತ್ತಿರುವುದರಿಂದ, ಡೊಂಬರಲ್ಲಿ ಸಹ ದೇವದಾಸಿ ಪದ್ಧತಿ ಇಳಿಮುಖವಾಗುತ್ತಾ ಬಂದಿದೆ.

ಇಂದು ಬದಲಾಗುತ್ತಿರುವ ಪ್ರಸ್ತುತ ಸಂದರ್ಭವು ಅನೇಕ ಅಂಶಗಳ ಬಡತನ, ನೋವುನಲಿವು, ಹೊಸತನಕ್ಕೆ ಹೊಂದಿಕೊಳ್ಳುವ ಕಾತುರ ಹಳ್ಳಿಯಲ್ಲಿ ಸಿಗುವ ಅತಿ ಕಡಿಮೆ ಕೂಲಿಯಿಂದ ಬೇಸತ್ತು, ಈ ಸಮುದಾಯವು ಕೆಟ್ಟು ಪಟ್ಟಣ ಸೇರು ಎಂಬ ಗಾದೆ ಮಾತಿನಂತೆ ಡೊಂಬರು ಸಮುದಾಯವು ನಿರ್ಗತಿಕರಾಗಿ ಸುತ್ತಮುತ್ತಲಿನಲ್ಲಿರುವ ಪಟ್ಟಣಗಳನ್ನು ಸೇರುತ್ತಿದ್ದಾರೆ. ಆಧುನಿಕತೆಯ ಆಕರ್ಷಣೆಗಳೊಗಾಗಿ ಫ್ಯಾಕ್ಟರಿಗಳಲ್ಲಿ ದಿನಗೂಲಿ ಕೆಲಸಕ್ಕೆ ಹೋಟಲ್‌ಗಳಲ್ಲಿ ಸಣ್ಣಪುಟ್ಟ ರೈಸ್‌ಮಿಲ್‌ನಲ್ಲಿ ಕೂಲಿಕೆಲಸ

ಮಾಡಲು ಸೇರಿಕೊಳ್ಳುತ್ತಿದ್ದರು. ಹೀಗೆ ಜೀವನ ಸಾಗುತ್ತಿರುವ ಇವರಿಗೆ ಇಂದಿಗೂ, ಭದ್ರತೆಯಿಲ್ಲದಾಗಿದೆ. ಉದಾ. ಪಟ್ಟಣದ ರಸ್ತೆಯ ಅಕ್ಕಪಕ್ಕ ಕೊಳಗೇರಿಗಳಲ್ಲಿ ಫುಟ್‌ಪಾತ್‌ನಲ್ಲಿಯೂ ಸಹವಾಸ ಮಾಡದಂತೆ, ಇವರು ನಿರ್ಮಿಸಿಕೊಂಡಿರುವ ಜೋಪಡಿ, ಟೆಂಟ್‌ಗಳನ್ನು ಕಿತ್ತೆಸೆದು ಸರಕಾರವು ಈ ಜನರನ್ನು ಒದ್ದು ಓಡಿಸುತ್ತಿದೆ. ಇದರಿಂದ, ಇವರು ಮತ್ತೆ ತಮ್ಮ ಹಳ್ಳಿಗಳಿಗೆ ವಾಪಸ್ಸು ಹೋಗುತ್ತಿದ್ದಾರೆ. ಇದರಿಂದಾಗಿ ಮೊದಲಿನಂತೆ ಇವರು ತಮ್ಮ ಜೀವನವನ್ನು ಹೀನಾಯವಾಗಿ ಕಳೆಯಬೇಕಾಗಿದೆ.

ಈ ಸಮುದಾಯದ ಜೀವನ ನೀತಿನಿಯಮಗಳು ಆಚಾರವಿಚಾರಗಳು ಉಳಿಯ ಬೇಕಾಗಿದೆ. ಜನತೆ ಹಾಗೂ ಸರ್ಕಾರ ಇವರಿಗೆ ಒಳ್ಳೆಯ ಕಣ್ಣಿನಿಂದ ಕಂಡು ಅವರ ಬದುಕಿಗೆ ಆಶ್ರಯವಾಗುವಂತಹ ಸಹಾಯ ನೀಡಿದರೆ, ಮಾತ್ರ ಇವರ ಬದುಕು ಭದ್ರವಾಗಬಲ್ಲದು. ನಮ್ಮ ಸರಕಾರದವರ ಈ ಸಮುದಾಯದಲ್ಲಿರುವ ನಿರುದ್ಯೋಗ ಯುವಕರನ್ನು ಗುರುತಿಸುವ ಒಂದು ವ್ಯವಸ್ಥೆಯನ್ನು ಮಾಡಿ, ಅವರಿಗೆ ಉದ್ಯೋಗ ಕೊಡುವುದಾಗಲಿ ತಿಂಗಳ ಪಿಂಚಣಿಯನ್ನು ನೀಡುವ ಮೂಲಕ ಹೀಗೆ, ನಿಶ್ಚಿತ ಸಹಾಯ ನಿಧಿಯೊಂದು ಬಂದಾಗ ಮಾತ್ರ ಅವರ ಜೀವನ ಸುಗಮವಾಗಿ ಸಾಗುತ್ತದೆ. ಆಗ ಸಮುದಾಯ ತಮ್ಮ ಕೆಲಸಕ್ಕೆ ಹೆಚ್ಚಿನ ಮಹತ್ವವನ್ನು ಕೊಡುತ್ತಾರೆ. ಆಗ, ಪ್ರತಿಯೊಂದು ರಂಗದಲ್ಲೂ ಇತರರೊಡನೆ ಪೈಪೋಟಿ ಮಾಡಲು ಸಿದ್ಧರಾಗುತ್ತಾರೆ. ಹೀಗೆ, ಬಡತನವೆಂಬ ನಿದ್ದೆಯಲ್ಲಿರುವ ಈ ಸಮುದಾಯವನ್ನು ಎಚ್ಚರಕೊಳ್ಳುವಂತೆ ಮಾಡಬೇಕಾಗಿದೆ.

□□

**ಟಿಪ್ಪಣಿಗಳು**

೧. ಡೊಂಬರ ಸಂಸ್ಕೃತಿ, ದೇವೇಂದ್ರಕುಮಾರ್, ಸಿ. ಹಕಾರಿ, ಪು.೩೦

೨. ಭಾರತದ ಆರ್ಥಿಕ ವ್ಯವಸ್ಥೆ, ಎಸ್.ಎನ್. ಶರಣಪ್ಪ, ಪು.೯೪

೩. ಡೊಂಬರ ಸಂಸ್ಕೃತಿ, ದೇವೇಂದ್ರಕುಮಾರ್, ಸಿ. ಹಕಾರಿ, ಪು.೪೫

೪. ಭಾರತ ಅರ್ಥವ್ಯವಸ್ಥೆ ಮತ್ತು ಸಾರ್ವಜನಿಕ ಅರ್ಥಶಾಸ್ತ್ರ, ಕೆ.ಡಿ. ಬಸವ, ಪು.೧೨೪

೫. ಕರ್ನಾಟಕ ರಾಜ್ಯದ ಆರ್ಥಿಕ ವ್ಯವಸ್ಥೆ, ಎಸ್.ಎನ್. ನಾಯಕ್, ಪು.೬೦

೬. ಕರ್ನಾಟಕ ರಾಜ್ಯದ ಆರ್ಥಿಕ ವ್ಯವಸ್ಥೆ, ಎಸ್.ಎನ್. ನಾಯಕ್, ಪು.೬೭

೭. ಕರ್ನಾಟಕ ರಾಜ್ಯದ ಆರ್ಥಿಕ ವ್ಯವಸ್ಥೆ, ಎಸ್.ಎನ್. ನಾಯಕ್, ಪು.೮೭

ಅಧ್ಯಾಯ ೫

# ವರ್ತಮಾನದಲ್ಲಿ ಬಳ್ಳಾರಿ ಜಿಲ್ಲೆಯ ಡೊಂಬರ ಸಮುದಾಯದ ಸ್ಥಾನಮಾನಗಳು

ಡೊಂಬರ ಸಮುದಾಯವು ನಾಗರೀಕ ಸಮಾಜದ ಜೊತೆಯಲ್ಲಿಯೇ ತನ್ನ ಬದುಕನ್ನು ರೂಪಿಸಿಕೊಳ್ಳುತ್ತಾ ಬಂದಿದೆ. ಹಲವು ವರ್ಷಗಳ ಕಾಲ ಸಮುದಾಯ ಅಲೆಮಾರಿಯಾಗಿತ್ತು. ಆ ಸಂದರ್ಭದಲ್ಲಿ ಡೊಂಬರ ಸಾಮಾಜಿಕ ಸ್ಥಾನಮಾನಗಳು ಉತ್ತಮವಾಗೇನೂ ಇರಲಿಲ್ಲ. ಇಂಡಿಯಾದ ಶ್ರೇಣಿಕೃತ ವ್ಯವಸ್ಥೆಯಲ್ಲಿದ್ದು ಕೊಂಡೇ ಈ ಸಮುದಾಯ ತನ್ನ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿದೆ. ಡೊಂಬರು ಅಲೆಮಾರಿಗಳಾಗಿ ದ್ದಂತಹ ಸಂದರ್ಭದಲ್ಲಿ ಶೈಕ್ಷಣಿಕ, ರಾಜಕೀಯ, ಆರ್ಥಿಕ, ಸಾಮಾಜಿಕ ಸ್ಥಾನಮಾನಗಳನ್ನು ಪಡೆಯಲಾಗಿರ ಲಿಲ್ಲ. ಆಧುನಿಕ ಸಮೂಹ ಮಾಧ್ಯಮಗಳ ಪ್ರವೇಶದಿಂದ ಡೊಂಬರಾಟ, ಸಂಪೂರ್ಣವಾಗಿ ನಶಿಸಿಹೋಯಿತು. ಇದಕ್ಕೆ ಇನ್ನೊಂದು ಕಾರಣ ಡೊಂಬರಾಟ ಆಡುವವರನ್ನು ಸಮಾಜವು ಕೀಳಾಗಿ ಕಾಣುತ್ತಿತ್ತು. ಅಲ್ಲದೆ ಡೊಂಬರಿಗೆ ಡೊಂಬರಾಟದಿಂದ ಜೀವನ ನಡೆಸುವುದು ತುಂಬಾ ಕಷ್ಟವಾಗಿತ್ತು. ಮೇಲಿನ ಎಲ್ಲಾ ಕಾರಣ ಗಳಿಂದಾಗಿ ಡೊಂಬರಾಟವನ್ನು ಸಂಪೂರ್ಣ ಕೈಬಿಟ್ಟರು. ಇದರಿಂದಾಗಿ ಒಂದೆಡೆ ನೆಲೆ ನಿಂತುಕೊಂಡು ಜೀವನ ಮಾಡಲು ಆರಂಭಿಸಿದ್ದರಿಂದ ಡೊಂಬರಿಗೆ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಗಳು ಬಹು ಮಟ್ಟಿಗೆ ಸುಧಾರಿಸಿದವು. ಇದರಿಂದಾಗಿ ವರ್ತಮಾನದ ಸಂದರ್ಭದಲ್ಲಿ ತಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಲು ಪ್ರಯತ್ನಿಸುತ್ತಿದ್ದಾರೆ.

ವರ್ತಮಾನದಲ್ಲಿ ಈ ಸಮುದಾಯದ ಸಾಮಾಜಿಕ ಸ್ಥಾನಮಾನದಲ್ಲಿ ಅಲ್ಪ ಸುಧಾರಣೆಯಾಗಿದೆ. ಆದರೆ ಆರ್ಥಿಕವಾಗಿ ಸಮುದಾಯವು ತನ್ನನ್ನು ತಾನು ಸುಧಾರಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಇದರಿಂದಾಗಿ ಇಂದು ಹಲವಾರು ಕಸುಬುಗಳಲ್ಲಿ ತೊಡಗಿಕೊಳ್ಳುತ್ತಿದೆ. ಆದರೆ ಆ ಕಸುಬುಗಳಿಗೆ ತೊಡಗಿಸಿಕೊಳ್ಳುವ ಪೂರ್ವದಲ್ಲಿ ಆಯಾ ಕಸುಬುಗಳ ಪೂರ್ವತರಬೇತಿ ಅಗತ್ಯವಾಗಿ ಇರಲೇಬೇಕಾಗುತ್ತದೆ. ಆದ್ದರಿಂದಾಗಿ ವರ್ತಮಾನದಲ್ಲಿ ವೃತ್ತಿ ತರಬೇತಿ ಮತ್ತು ತಾಂತ್ರಿಕ ಪರಿಣಿತಿಯ ಸಮಸ್ಯೆಯನ್ನು ಈ ಸಮುದಾಯವು

ಎದುರಿಸುತ್ತಿದೆ. ಹೀಗಾಗಿ ತನ್ನ ಆರ್ಥಿಕ ಸ್ಥಾನಮಾನ ಕಾಯ್ದುಕೊಳ್ಳುವಲ್ಲಿ ಸಮುದಾಯವು ವಿಫಲವಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ರಾಜಕೀಯ ಸ್ಥಾನಮಾನಕ್ಕೆ ಸಂಬಂಧಿಸಿದಂತೆ ಇತರ ಸಮುದಾಯಗಳೊಂದಿಗೆ ಈ ಸಮುದಾಯವನ್ನು ಹೋಲಿಸಿ ನೋಡಿದಾಗ, ಸಮುದಾಯದ ರಾಜಕೀಯ ಸ್ಥಾನಮಾನ ಉತ್ತಮಗೊಂಡಿಲ್ಲ. ಇದಕ್ಕೆ ಹಲವಾರು ಕಾರಣಗಳನ್ನು ಕಂಡುಕೊಳ್ಳಲಾಗಿದೆ. ಸಮುದಾಯವು ಮೀಸಲಾತಿ ಗುಂಪಿನೊಳಗಡೆ ಬಂದಿದ್ದರೂ ಸಹ ಇದರ ಸಮೀಪವರ್ತಿ ಸಮುದಾಯಗಳಾದ ಹೊಲೆಯಮಾದಿಗ, ವಡ್ಡರು ಲಂಬಾಣಿಗಳು ರಾಜಕೀಯವಾಗಿ ಬಹಳ ಮುಂದುವರೆದಿವೆ. ಮೇಲಿನ ಸಮುದಾಯಗಳು, ಜನಸಂಖ್ಯೆಯ ದೃಷ್ಟಿಯಿಂದಲೂ ಪ್ರಭಲವಾಗಿವೆ. ಅಲ್ಲದೆ, ಶೈಕ್ಷಣಿಕ, ಆರ್ಥಿಕ ಮುಂತಾದವುಗಳು ಉತ್ತಮವಾಗಿರುವುದರಿಂದ ಸುಲಭವಾಗಿ ರಾಜಕೀಯ ಪ್ರವೇಶವನ್ನು ಪಡೆದಿವೆ. ಡೊಂಬರ ಸಮುದಾಯವು ಇನ್ನು ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸ್ಥಾನಮಾನಗಳಲ್ಲಿ ತುಂಬಾ ಸುಧಾರಿಸಬೇಕಾಗಿದೆ. ಹೀಗೆ ಭೂಮಿ ಮತ್ತು ನಿವೇಶನ, ವಸತಿಗೆ ಸಂಬಂಧಿಸಿದಂತೆ ಡೊಂಬರ ಸ್ಥಾನಮಾನಗಳು ಇತರೆ ಸಮುದಾಯಗಳ ಸ್ಥಾನಮಾನಕ್ಕಿಂತಲೂ ತೀರ ಕೆಳ ಹಂತದಲ್ಲಿವೆ.

ಸಾಮಾಜಿಕವಾಗಿ ಇತರ ಸಾವರ್ಣೀಯ ಸಮುದಾಯಗಳೊಂದಿಗೆ ಇವರು ಕೂಡ ಸ್ಪೃಶ್ಯರಾಗಿಯೇ ಗುರುತಿಸಿಕೊಂಡಿದ್ದಾರೆ. ಆದರೆ ಆರ್ಥಿಕವಾಗಿ ಮುಂದುವರೆಯದ ಡೊಂಬರು ಅಸ್ಪೃಶ್ಯರಂತೆಯೇ ಬದುಕು ತ್ತಿದ್ದಾರೆ. ಡೊಂಬರೆಂದರೆ ಧೈರ್ಯವಂತರು ಶೌರ್ಯವಂತರು ಎಂದು ಇತರೆ ಸಮುದಾಯಗಳು ಹೇಳುತ್ತವೆ. ಅನಾವಶ್ಯಕವಾಗಿ ಇತರ ಸಮುದಾಯಗಳೊಂದಿಗೆ ಘರ್ಷಣೆ ಮಾಡುವುದಿಲ್ಲ. ಬದಲಾಗಿ ಸಮುದಾಯಗಳೊಂದಿಗೆ ಹೊಂದಿಕೊಂಡು ಸಾಮರಸ್ಯ ಜೀವನ ನಡೆಸುತ್ತಿದ್ದಾರೆ. ಕಳ್ಳತನ, ಕೊಲೆ, ದರೋಡೆಗೆ ಸಂಬಂಧಿಸಿದಂತೆ ಅಥವಾ ನ್ಯಾಯಾಲಯದಲ್ಲಾಗಲಿ ಇದುವರೆಗೂ ಕೇಸುಗಳು ದಾಖಲೆಯಾಗಿಲ್ಲ. ಇದು ಶಾಂತಿಪ್ರೀಯ ಸಮುದಾಯವಾಗಿದೆ. ಅಸ್ಪೃಶ್ಯ ಸಮುದಾಯಗಳನ್ನು ಕೂಡ ಸಮಾನವಾಗಿ ಕಾಣುತ್ತಿದೆ. ಡೊಂಬರ ಸಮುದಾಯದಲ್ಲಿ ಮಹಿಳೆಯರನ್ನು ಗೌರವ ಮತ್ತು ಸಮಾನ ದೃಷ್ಟಿಯಿಂದ ಕಾಣುತ್ತಾರೆ.

ಇಂದು ಡೊಂಬರ ಸಹ ಜಾತಿಸಂಘಟನೆಯನ್ನು ಕಟ್ಟಿಕೊಂಡಿದ್ದಾರೆ. ತಮ್ಮ ನ್ಯಾಯಯುತ ಬೇಡಿಕೆಗಳನ್ನು ಪಡೆಯುವಲ್ಲಿ ಸಂಘಟನೆ ಕಾರ್ಯನಿರತವಾಗಿದೆ. ಸಮುದಾಯದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಸಂಘಟನೆ ಮಹತ್ವದ ಪಾತ್ರ ವಹಿಸುತ್ತದೆ. ಇತರೆ, ಯಾವುದೇ ಸಮುದಾಯಗಳಿಗೆ ಅನ್ಯಾಯವಾಗಿದ್ದಲ್ಲಿ ಅಥವಾ ಸಮುದಾಯ ಸಮುದಾಯಗಳ ನಡುವೆ ಘರ್ಷಣೆ ಸಂಭವಿಸಿದಾಗ, ಆ ಸಮುದಾಯಗಳಲ್ಲಿ ಘರ್ಷಣೆಗೆ, ಸಂಬಂಧಿಸಿದಂತೆ ಯಾರದು ತಪ್ಪಿತ್ತೆಂದು ಸೂಕ್ಷ್ಮವಾಗಿ ಗ್ರಹಿಸುವ ಮೂಲಕ, ಡೊಂಬರ ಸಂಘಟನೆಯ ಮುಖಂಡರು ಸೂಕ್ತ ಹೇಳಿಕೆಯನ್ನು ಹೇಳುವ ಮುಖಾಂತರ

ಖಂಡಿಸುತ್ತಾರೆ. ಅದೇ ರೀತಿಯಾಗಿ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ, ರಾಜ್ಯ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಮೀಸಲಾತಿಯ ವಿಷಯದಲ್ಲಿ ಗೊಂದಲ ತಲೆದೂರಿದಾಗ ಡೊಂಬರ ಸಂಘಟನೆಯು ದಲಿತ ಸಂಘರ್ಷ ಸಮಿತಿಯೊಂದಿಗೆ ಸೇರಿಕೊಂಡು ಹೋರಾಟ ಮಾಡುತ್ತಿದೆ. ಆದರೆ ರಾಜಕೀಯ ಮೀಸಲಾತಿಯ ವಿಷಯ ಬಂದಾಗ ಬಹುಸಂಖ್ಯಾತ ಪರಿಶಿಷ್ಟ ಜಾತಿಗಳಿಗೂ ಡೊಂಬರ ಸಮುದಾಯಕ್ಕೂ ಸಂಘರ್ಷಗಳೇರ್ಪಟ್ಟ ಘಟನೆಗಳು ರಾಜ್ಯಾದಂತ ನಡೆದಿವೆ. ಡೊಂಬರು ಮೂಲತಃ ಅಲ್ಪಸಂಖ್ಯಾತರು. ಇದೊಂದು ಅತ್ಯಂತ ಅಲ್ಪಸಂಖ್ಯಾತ ಪರಿಶಿಷ್ಟ ಜಾತಿಯಾಗಿದೆ. ಭಾರತದಲ್ಲಿ ಶಕ್ತಿ ರಾಜಕಾರಣವೆಂದರೆ ಹಣ, ತೋಳ್ಬಲಗಳ ರಾಜಕಾರಣವೇ ಆಗಿದೆ. ಆದರೆ ರಾಜಕೀಯ ಮೀಸಲಾತಿಯ ಸಂದರ್ಭದಲ್ಲಿ ಬಹುಸಂಖ್ಯಾತ ಪರಿಶಿಷ್ಟ ಜಾತಿಗಳು ತಮ್ಮ ತೋಳ್ಬಲವನ್ನು ಪ್ರದರ್ಶಿಸಲು ಮುಂದಾಗುತ್ತವೆ. ಇದು ಭಾರತದ ಶಕ್ತಿ ರಾಜಕಾರಣದ ಸಹಜ ನಡುವಳಿಕೆಯಂತೆಯೇ ಘಟಿಸಿಬಿಡುತ್ತದೆ. ಗ್ರಾಮಪಂಚಾಯಿತಿ, ತಾಲೂಕು, ಜಿಲ್ಲಾ ಪಂಚಾಯಿತಿಯ ಮೀಸಲಾತಿ ವಿಷಯದಲ್ಲಿ ಬಹುಸಂಖ್ಯಾತ ಪರಿಶಿಷ್ಟ ಜಾತಿಗಳು ಈ ಬಗೆಯ ಅಲ್ಪಸಂಖ್ಯಾತ ಸಮುದಾಯಗಳ ಮೇಲೆ ಸಹಜವಾಗಿಯೇ ತೋಳ್ಬಲದ ಪ್ರದರ್ಶನ ನೀಡುತ್ತವೆ. ಆಗ ಯಾವ ಪರಿಶಿಷ್ಟರು ಯಜಮಾನ ವರ್ಗದ ವಿರುದ್ಧ ಸಂಘಟಿತವಾಗಿ ಹೆಣಗಾಡಬೇಕಿತ್ತೋ ಅವರೇ ದಾಯಾದಿಗಳಾಗಿ ಕಚ್ಚಾಡುತ್ತಾ, ಚಳುವಳಿಗಳಿಂದ ವಿಮುಖರಾಗುತ್ತಿದ್ದಾರೆ.

### ಅ. ಬಳ್ಳಾರಿ ಜಿಲ್ಲೆಯ ಇತರೆ ಸಮುದಾಯಗಳು ಮತ್ತು ಡೊಂಬರು

ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ ವಿಕೇಂದ್ರೀಕರಣದ ಹೆಸರಲ್ಲಿ ನಡೆವ ಶಕ್ತಿ ರಾಜಕಾರಣದ ಸ್ಥಳೀಯ ವಿರೂಪಗಳನ್ನು ನಾವು ಗಮನಿಸದೆ, ಅಧಿಕಾರದ ವಿಕೇಂದ್ರೀಕರಣದ ಕುರಿತು ಗಟ್ಟಿಯಾಗಿ ಭಜನೆ ಮಾಡುತ್ತಿದ್ದೇವೆ. ಜಾತ್ಯಾತೀತ ಭಾರತದಲ್ಲಿ ಒಂದು ಸಮುದಾಯ ತನ್ನ ಹಕ್ಕುಗಳನ್ನು ಜಾತಿ ಸಂಘಟನೆಯ ಮೂಲಕ ಪಡೆಯಲು ಯತ್ನಿಸುವುದೇ ಒಂದು ವ್ಯವಸ್ಥೆ. ಬಳ್ಳಾರಿ ಜಿಲ್ಲೆಯ ಡೊಂಬರ ಸಮುದಾಯ ಮತ್ತು ಇತರೆ ಸಮುದಾಯಗಳೊಂದಿಗೆ ಸಾಮಾಜಿಕ ಸಂಪರ್ಕ ಹೊಂದಿದೆ. ಡೊಂಬರು ಭಾರತದ ಜಾತಿವ್ಯವಸ್ಥೆಯಲ್ಲಿ ಅತ್ಯಂತ ಕೆಳಜಾತಿಯಾಗಿದ್ದರೂ ಇತರೆ ಸಮುದಾಯಗಳೊಂದಿಗೆ ಹೊಂದಿಕೊಂಡಿದ್ದಾರೆ. ಇತರೆ ಮೇಲ್ಜಾತಿಯ ಸಮುದಾಯಗಳು ಕೀಳಾಗಿ ಕಂಡರೂ ಬದಲಾಗುತ್ತಿರುವ ಸಂದರ್ಭದಲ್ಲಿ ಪರಸ್ಪರ ತಿಳುವಳಿಕೆಯಿಂದ ಕೀಳಾಗಿ ಕಾಣುವುದನ್ನು ಅವರು ಕಡಿಮೆ ಮಾಡಿದ್ದಾರೆ. ಡೊಂಬರಾಟ ವೃತ್ತಿ ಕಾರಣದಿಂದ ಈ ಸಮುದಾಯವನ್ನು ಅಂದಿನ ಸಮಾಜ ಕೀಳಾಗಿ ಕಂಡಿತ್ತೆ ವಿನಃ ಬೇರೆಯಾವುದರಿಂದಲೂ ಅಲ್ಲ. ಇವತ್ತು ಆ ವೃತ್ತಿಯನ್ನು ಈ ಸಮುದಾಯವು ಬಿಟ್ಟಿದೆ. ಇತರರಂತೆ ವ್ಯವಸಾಯ, ಕೃಷಿಕೂಲಿ ಕುರಿಸಾಗಾಣಿಕೆ ಬೇಲ್‌ದಾರ ಕೆಲಸ, ನಿರ್ವಹಕರು, ಟೈಲರಿಂಗ್, ಜೊತೆಗೆ ಖಾಸಗಿ ಕಂಪನಿಗಳಲ್ಲಿ

ದುಡಿಯುವುದರ ಮೂಲಕ ಜೀವನ ಸಾಗಿಸುತ್ತಿದ್ದಾರೆ. ಈ ಕಾರಣದಿಂದಾಗಿ ಈ ಸಮುದಾಯಕ್ಕೆ ಸಾಮಾಜಿಕ ನೋವು ಕಡಿಮೆಯಾಗಿದೆ. ಅಲ್ಲದೆ, ಇಂದು ಸಮುದಾಯವು ಕೂಡ, ನಾವು ಇತರರಿಗಿಂತ ಕಡಿಮೆ ಏನೂ ಅಲ್ಲ ಅನ್ನುವಂತಹ ದೃಢಭಾವನೆ ಇವರಲ್ಲಿ ಮಾಡಿದೆ.

## ಊರನಾಯಕರ ಮತ್ತು ಮ್ಯಾಸನಾಯಕರ ಜೊತೆ ಡೊಂಬರ ಸಂಬಂಧ

ಮೊದಲಿಗೆ, ಊರನಾಯಕರು ಮತ್ತು ಮ್ಯಾಸನಾಯಕರು ಡೊಂಬರಿಗಿಂತ ನಾವೇ ಶ್ರೇಷ್ಠರು ಎಂದು ತಿಳಿದಿದ್ದರು. ಬದಲಾಗುತ್ತಿರುವ ಸಂದರ್ಭದಲ್ಲಿ ನಾಯಕರ ಸಮುದಾಯದಲ್ಲಿ ವಿದ್ಯಾವಂತ, ಬುದ್ಧಿವಂತರು ವಿಚಾರವಂತರು ತಮ್ಮ ಮೇಲೆಯೇ ಇತರ ಮೇಲ್ವರ್ಗಗಳು ಇದುವರೆಗೂ ನಡೆಸುತ್ತಾ ಬಂದಿರುವ ಶೋಷಣೆಯನ್ನು ನಾವು ಅನುಭವಿಸಿದ್ದೇವೆ. ಹೀಗಾಗಿ ನಾವು ಇತರರನ್ನು ಸಾಮಾಜಿಕ, ಆರ್ಥಿಕ ವ್ಯವಹಾರಗಳಲ್ಲಿ ನಾವು ಯಾರನ್ನು ಕೀಳಾಗಿ ಕಾಣಬಾರದು ಎಂಬ ದೃಷ್ಟಿಕೋನದಿಂದ ಪರಸ್ಪರ ಸಮುದಾಯಗಳಲ್ಲಿ ಸಹಕಾರ ಅಗತ್ಯ ಮತ್ತು ಮಾನವರೆಲ್ಲಾ ಒಂದೇ ಎಂಬ ಸಮಾನ ಭಾವನೆಯ ಫಲವಾಗಿ ನಾಯಕರು ಮತ್ತು ಡೊಂಬರು ಪರಸ್ಪರ ಹೊಂದಾಣಿಕೆಯ ಹೆಜ್ಜೆಯನ್ನು ಇಡುತ್ತಿದ್ದಾರೆ. ಅಲ್ಲದೆ ಡೊಂಬರ ಮನೆಗಳು ನಾಯಕರ ಮನೆಗಳ ಹತ್ತಿರದಲ್ಲಿರುವುದರಿಂದ ಡೊಂಬರ ಮನೆಯೊಳಗೆ ನಾಯಕರು ಬರುತ್ತಾರೆ ಮತ್ತು ನಾಯಕರ ಮನೆಯೊಳಗೆ ಡೊಂಬರು ಹೋಗುತ್ತಾರೆ. ಆದರೆ ಡೊಂಬರ ಮನೆಯೊಳಗೆ ನಾಯಕರು ಊಟ ಮಾಡುವುದಿಲ್ಲ. ಆದರೆ ನಾಯಕರು ಮತ್ತು ಡೊಂಬರು ಜತೆ ಸೇರಿಯೇ ಬಯಲಾಟವನ್ನು ಆಡುತ್ತಾರೆ. ಬಳ್ಳಾರಿ ಜಿಲ್ಲೆಯಲ್ಲಿ ನಾಯಕರೇ ಬಹುಸಂಖ್ಯಾತರಾಗಿರುವ ಕಾರಣ ಡೊಂಬರು ಸಹಜವಾಗಿ ಇವರ ಜೊತೆ ಉತ್ತಮ ಸಂಬಂಧವನ್ನು ಹೊಂದಿದ್ದಾರೆ. ಆದರೆ ಸಾಮಾಜಿಕವಾಗಿ ನಾಯಕರು ಡೊಂಬರನ್ನು ಇನ್ನೂ ಕೀಳಾಗಿಯೇ ಕಾಣುವ ಪ್ರವೃತ್ತಿಯನ್ನು ಬಿಟ್ಟುಕೊಟ್ಟಿಲ್ಲ.

## ವಡ್ಡರು, ಲಂಬಾಣಿಯರು ಮತ್ತು ಕೊರವರ ಜತೆ ಡೊಂಬರ ಸಂಬಂಧ

ಸಾಮಾಜಿಕವಾಗಿ ವಡ್ಡರು ಮತ್ತು ಲಂಬಾಣಿಗಳು, ಕೊರವರು ಇತರ ಮೇಲ್ವರ್ಗದವರ ಸಂಪರ್ಕವನ್ನು ಬೆಳೆಸಿಕೊಂಡಿದ್ದಾರೆ. ಹಾಗೆ, ಡೊಂಬರು ತಮ್ಮ ಸ್ಥಾನಮಾನಗಳನ್ನು ಮತ್ತು ಸ್ವಾಭಿಮಾನವನ್ನು ಈ ಸಮುದಾಯಗಳೊಂದಿಗೆ ಗುರುತಿಸಿಕೊಂಡಿದ್ದಾರೆ. ವಡ್ಡರು ಮತ್ತು ಕೊರುವರು, ಡೊಂಬರು ವಿವಾಹ ಸಂದರ್ಭಗಳಲ್ಲಿ ಭಾಗವಹಿಸುತ್ತಾರೆ. ಪರಿಶಿಷ್ಟಜಾತಿಯ ಪಟ್ಟಿಯಲ್ಲಿ ಇವರೆಲ್ಲಾ ಬರುವುದರಿಂದ ತಾವೆಲ್ಲ ಒಂದೇ ಎಂಬ ಭಾವನೆ ಇವರಲ್ಲಿದೆ. ಈ ಬಗೆಯ ಸಮಾನತೆ ರಾಜಕೀಯವಾಗಿ ಬೆಳೆದಿದೆಯೇ ವಿನಹ, ಸಾಮಾಜಿಕವಾಗಿ ಈ ಎಲ್ಲ ಸಮುದಾಯಗಳ ನುವೆ ಮೇಲುಕೀಳುಗಳ ಭಾವನೆಗಳಿವೆ.

ಬಳ್ಳಾರಿ ಜಿಲ್ಲೆಯಲ್ಲಿ ವಾಸ ಮಾಡುತ್ತಿರುವ ಡೊಂಬರು ಮತ್ತು ಇತರೆ ಸಮುದಾಯಗಳು ವಿಶೇಷವಾಗಿ ಡೊಂಬರು ವಾಸಮಾಡುವ ಕಡೆಗಳಲ್ಲಿ ಇತರೆ ಹಲವಾರು ಸಮುದಾಯಗಳು ಕೂಡ ವಾಸಮಾಡುತ್ತಿವೆ. ಇತರೆ ಸಮುದಾಯಗಳು ಮತ್ತು ಡೊಂಬರು ಇಲ್ಲಿ ಡೊಂಬರ ಸಮುದಾಯವು ಕುಟುಂಬಗಳ ಸಂಖ್ಯಾದೃಷ್ಟಿಯಿಂದ ಕಡಿಮೆ ಇದೆ. ಇತರೆ ಸಮುದಾಯದ ಕುಟುಂಬಗಳ ಸಂಖ್ಯಾದೃಷ್ಟಿ ಕಡಿಮೆ ಇವೆ. ಇತರೆ ಸಮುದಾಯಗಳಾದ ನಾಯಕರು, ಲಿಂಗಾಯತರು, ಮುಸ್ಲಿಮರು, ಮಾದಿಗರು, ಕುರುಬರು, ಹೊಲೆಯರು, ಲಂಬಾಣಿಗಳ, ಕುಟುಂಬಗಳು ಅಧಿಕ ಸಂಖ್ಯೆಯಲ್ಲಿವೆ. ಸಾಮಾಜಿಕವಾಗಿ ಡೊಂಬರು ಇತರ ಸಮುದಾಯಗಳೊಂದಿಗೆ ಅನ್ಯೋನ್ಯ ಸಂಬಂಧವನ್ನು ಹೊಂದಿದ್ದಾರೆ. ಇದರಿಂದಾಗಿ ಈ ಸಮುದಾಯಕ್ಕೆ ಸಾಮಾಜಿಕ ಕೀಳಿರಿಮೆ ಅಷ್ಟಾಗಿ ಬಾಧಿಸುತ್ತಿಲ್ಲ. ಬಳ್ಳಾರಿ ಜಿಲ್ಲೆಯಲ್ಲಿ ಲಿಂಗಾಯತರು, ರೆಡ್ಡಿಯರು, ಕಮ್ಮಾರರು, ಕುರುಬರು, ಮುಸ್ಲಿಮರು, ಉಪ್ಪಾರರು, ನಾಯಕರು, ಬ್ರಾಹ್ಮಣರು, ಲಂಬಾಣಿಗಳು, ಮಾದಿಗರು, ಹೊಲೆಯರು, ವಡ್ಡರು ಅಧಿಕ ಭೂಮಿಯನ್ನು ಹೊಂದಿದ ಸಮುದಾಯ ಗಳಾಗಿವೆ. ಡೊಂಬರು, ಕೊರಚರು, ಕೊರವರು ಮುಂತಾದ ಸಮುದಾಯಗಳು ಅತಿ ಕಡಿಮೆ ಭೂಮಿಯನ್ನು ಹೊಂದಿದ ಸಮುದಾಯಗಳಾಗಿವೆ. ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಸುಮಾರು ಜಾತಿಯ ಸಮುದಾಯಗಳಿವೆ. ಹೀಗಾಗಿ ಡೊಂಬರ ಸಮುದಾಯವು ಸರ್ಕಾರಿ ಸೌಲಭ್ಯಗಳಿಂದ ಆಶ್ರಯ ಮನೆ, ಭಾಗ್ಯಜ್ಯೋತಿ, ಸಮುದಾಯ ಭವನ, ಬಡತನ ರೇಖೆಯ ಕೆಳಗಡೆ ಅಂತ್ಯೋದಯ, ಪಡಿತರ ಚೀಟಿ, ಸಾಲಸೌಲಭ್ಯಗಳು, ಭೂಮಿ, ಮುಂತಾದ ಸೌಲಭ್ಯಗಳನ್ನು ಪಡೆಯಲಾಗಿಲ್ಲ. ಮೇಲಿನ ಸೌಲಭ್ಯಗಳನ್ನು ಈ ಸಮುದಾಯವು ಪಡೆಯಬೇಕಾದರೆ ಪರಿಶಿಷ್ಟಜಾತಿಯ ಪಟ್ಟಿಯಲ್ಲಿ ಬರುವ ಸುಮಾರು ನೂರು ಜಾತಿಯ ಸಮುದಾಯ ಗಳೊಂದಿಗೆ ಪೈಪೋಟಿ ನಡೆಸಬೇಕಾಗುತ್ತದೆ. ಇದು ಡೊಂಬರ ಸಮುದಾಯಕ್ಕೆ ಸಾಧ್ಯವಾಗುತ್ತಿಲ್ಲ. ಇದಕ್ಕೆ ಹಲವಾರು ಕಾರಣಗಳಿವೆ. ಪ್ರಮುಖ ಕಾರಣಗಳೆಂದರೆ, ನಿರಂತರ ಅಲೆಮಾರಿಗಳಾಗಿದ್ದ ಡೊಂಬರ ಸಮುದಾಯವು ಶೈಕ್ಷಣಿಕ, ಆರ್ಥಿಕ, ರಾಜಕೀಯ, ಸಾಮಾಜಿಕ ಸ್ಥಾನಮಾನಗಳಿಂದ ತುಂಬಾ ದೂರಿ ನಿಂತಿದೆ. ಇವು ನೆಲೆನಿಂತ ಅವಧಿ ತುಂಬಾ ಕಡಿಮೆ ಎಂದು ಹೇಳಬಹುದು. ಇತರೆ ಸಮೀಪವರ್ತಿ ಸಮುದಾಯಗಳಾದ ಲಂಬಾಣಿಗರು, ಹೊಲೆಯರು, ಮಾದಿಗರು, ವಡ್ಡರು, ದಾಸರು ಮುಂತಾದ ಸಮುದಾಯಗಳು ನೆಲೆನಿಂತು ಸುಮಾರು ವರ್ಷಗಳೇ ಕಳೆದಿವೆ. ಹೀಗಾಗಿ ಶೈಕ್ಷಣಿಕ, ಆರ್ಥಿಕ, ರಾಜಕೀಯವಾಗಿ ಮುಂದುವರೆದ ಸಮುದಾಯಗಳಾಗಿವೆ. ಹಾಗೂ ಉದ್ಯೋಗ, ಸರ್ಕಾರಿ ಸೌಲಭ್ಯಗಳು ಪಡೆಯುವಲ್ಲಿ ಈ ಮೇಲಿನ ಸಮುದಾಯಗಳು ಮೇಲುಗೈ ಸಾಧಿಸಿವೆ.

ಡೊಂಬರು ಜಾತಿ ಸಂಘಟನೆಯನ್ನು ಇತ್ತೀಚೆಗೆ ಕಟ್ಟಿಕೊಂಡಿದ್ದಾರೆ. ಈ ಸಮುದಾಯವು ಇನ್ನೂ ವ್ಯವಸ್ಥಿತವಾಗಿ ಸಂಘಟಿತವಾಗಿಲ್ಲ. ಆದರೆ ಸುಸಜ್ಜಿತವಾಗಿ ಸಂಘಟಿತವಾಗಬೇಕಾಗಿದೆ. ಸಂಘಟಿತವಾದಾಗ

ಮಾತ್ರ, ಸಮುದಾಯಕ್ಕೆ ಬರಬೇಕಾದ ಸರ್ಕಾರಿ ಸೌಲಭ್ಯಗಳನ್ನು ಸುಲಭವಾಗಿ ಪಡೆದುಕೊಳ್ಳಬಹುದು. ಆದರೆ, ಇತರೆ, ಸಮುದಾಯಗಳಾದ, ಮಾದಿಗರು, ಹೊಲೆಯ ಲಂಬಾಣಿಗಳು, ವಡ್ಡರು, ಕೊರಚರು, ಮಡಿವಾಳರು, ತಮ್ಮ ತಮ್ಮ ಜಾತಿ ಸಂಘಟನೆಯನ್ನು ಕಟ್ಟಿ ಸರಕಾರಿ ಸೌಲಭ್ಯಗಳನ್ನು ಪಡೆಯುವ ಮುಂಚೂಣಿಯಲ್ಲಿದ್ದಾರೆ.

## ಆ. ಆರ್ಥಿಕ ಕ್ಷೇತ್ರದಲ್ಲಿನ ಸ್ಥಾನಮಾನಗಳು

ಡೊಂಬರ ಸಮುದಾಯವು ಇಂದು ಒಂದೇ ಕಡೆ ನೆಲೆನಿಂತು ತಮ್ಮ ಹಳೆಯ ಜೀವನ ಶೈಲಿಯನ್ನು ಬಿಟ್ಟುಕೊಟ್ಟು, ಇಂದು ನಾಡಿನ ಜನರ ಮಧ್ಯದಲ್ಲಿ ತಮ್ಮ ಆರ್ಥಿಕ ಬದುಕನ್ನು ರೂಪಿಸಿಕೊಳ್ಳಲು ಹೊರಟಿದೆ. ಇಂದು ಈ ಸಮುದಾಯದವರು ಹತ್ತು ಹಲವಾರು ಕಸುಬುಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಈ ಸಮುದಾಯವು ಕೈಗೊಂಡಿರುವ ಕಸಬುಗಳೇ ಸಮುದಾಯದ ಆರ್ಥಿಕ ಸ್ಥಾನಮಾನ ನಿರ್ಧರಿಸುವ ಬಹುಮುಖ್ಯವಾದ ಅಂಶಗಳಾಗಿವೆ. ಬಳ್ಳಾರಿ ಜಿಲ್ಲೆಯ ಡೊಂಬರ ಸಮುದಾಯದ ಆರ್ಥಿಕ ಕ್ಷೇತ್ರದ ಸ್ಥಾನಮಾನ ನಿರ್ಧಿರಿಸುವ ಕಸಬುಗಳನ್ನೆ ಕ್ಷೇತ್ರಕಾರ್ಯದಲ್ಲಿ ಪಡೆದ ಮಾಹಿತಿಯ ಪ್ರಕಾರ ಪ್ರಸ್ತುತ ಪಡಿಸುತ್ತಿದ್ದೇನೆ. ಸಮುದಾಯವು ಕೈಗೊಂಡಿರುವ ಪ್ರಮುಖ ವೃತ್ತಿಗಳೆಂದರೆ, ಮೊದಲನೆಯದಾಗಿ ಕೃಷಿಕಾರ್ಮಿಕರಾಗಿ ಭೂಮಾಲಿಕರ ಹೊಲಗದ್ದೆಗಳಲ್ಲಿ ದುಡಿಯುತ್ತಿದ್ದಾರೆ. ಇದರಿಂದ ಬರುವ ದಿನದ ಕೂಲಿ ಒಬ್ಬರಿಗೆ ಹೆಣ್ಣುಮಕ್ಕಳಿಗೆ, ೧೫ ರೂಪಾಯಿಗಳು ಮತ್ತು ಗಂಡಸರಿಗೆ ೨೦ ರೂ. ಸಿಗುತ್ತದೆ. ಇವರಿಗೆ ಸಿಗುತ್ತಿರುವ ಕೂಲಿ ಅತಿ ಕಡಿಮೆಯಾಗಿದೆ. ಹೀಗಾಗಿಯೇ ಇವರ ಜೀವನ ನಿರ್ವಹಣೆಗೂ ಕೂಡ ಸಾಕಾಗುವುದಿಲ್ಲ. ಪ್ರತಿದಿನ ಗಂಡಹೆಂಡತಿ ಇಬ್ಬರೂ ದುಡಿದರೆ ಮಾತ್ರ ಪ್ರತಿದಿನದ ಊಟ. ಇಲ್ಲದಿದ್ದರೆ ಆ ದಿನ ಊಟಕ್ಕಾಗಿ ಸಾಲ ಮಾಡಬೇಕಾಗುತ್ತದೆ. ಇದರ ಮಧ್ಯದಲ್ಲಿಯೇ ಖಾಯಿಲೆ, ಅನಾರೋಗ್ಯ ಮತ್ತು ಹಬ್ಬಹರಿದಿನಗಳು ಜಾತ್ರೆ, ಉತ್ಸವಗಳ ಸಂದರ್ಭದಲ್ಲಿ ಹಣದ ತೊಂದರೆಯನ್ನು ಅನುಭವಿಸ ಬೇಕಾಗುತ್ತದೆ. ವಿಧಿಯಿಲ್ಲದೆ ಆಗ ಸಾಲ ಮಾಡಬೇಕಾಗುತ್ತದೆ. ಅಥವಾ ಮುಂದಿನ ಪೀಳಿಗೆಗೆ ಸಾಲವನ್ನೆ ಬಿಟ್ಟು ಹೋಗಬೇಕಾಗುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಈ ಸಮುದಾಯವು ಒಟ್ಟು ಕೃಷಿ ಕಾರ್ಮಿಕರ ಸಂಖ್ಯೆ ಶೇ. ೮೪ ರಷ್ಟಿದೆ. ಇವರಿಗೆ ಸಿಗುವ ಕೃಷಿಕೂಲಿಯು ವರ್ಷ ಪೂರ್ತಿ ಇರುವುದಿಲ್ಲ. ಅವರಿಗೆ ವರ್ಷಪೂರ್ತಿ ಕೆಲಸ ಸಿಗುವುದಿಲ್ಲ. ಅದು ಕೇವಲ ಮೂರು ಅಥವಾ ಆರು ತಿಂಗಳು ಮಾತ್ರ ಕೆಲಸ ಸಿಗುತ್ತದೆ. ಇನ್ನುಳಿದ ಆರು ತಿಂಗಳು ಮನೆಯಲ್ಲಿಯೇ ಖಾಲಿ ಕೂಡಬೇಕಾಗುತ್ತದೆ. ಇಲ್ಲವೆ ಕಾಫಿ ತೋಟಗಳಿಗೆ ದುಡಿಯಲು ಹೋಗಬೇಕಾಗುತ್ತದೆ. ಇದರಿಂದಾಗಿ ಡೊಂಬರ ಸಮುದಾಯದಲ್ಲಿ ಕೃಷಿಕೂಲಿಗಳಾಗಿ ದುಡಿಯುವ ಜನರ ಆರ್ಥಿಕ ಸ್ಥಿತಿ ತುಂಬಾ ಚಿಂತಾಜನಕವಾಗಿರುತ್ತದೆ.

ಬೃಹತ್ ಉತ್ಪಾದನೆಯ ಹುಚ್ಚೇ ಇಂದಿನ ಸಂಕಷ್ಟಗಳಿಗೆಲ್ಲಾ ಕಾರಣ. ಉತ್ಪಾದನೆ ಒಂದು ಕಡೆಯಾದರೆ, ವಿತರಣೆ ನೂರಾರು ಕಡೆ, ಇದು ಸರಿಯಾದ ಕ್ರಮವಲ್ಲ. ಸಾಧ್ಯವಾದಷ್ಟು ಮಟ್ಟಿಗೆ ಉತ್ಪಾದನೆ ಮತ್ತು ವಿತರಣೆ ಎರಡೂ ವಸ್ತುವಿನ ಅಗತ್ಯತೆ ಇರುವ ಕಡೆಯೇ ಆಗಬೇಕು. ಆಗ ಮೋಸಕ್ಕೆ, ಶೋಷಣೆಗೆ ಅವಕಾಶ ಕಡಿಮೆ, ವಿತರಣೆಯ ನಿಯಂತ್ರಣ ಸುಲಭ. "ಸಮೃದ್ಧಿಯೆಂದರೆ ಪ್ರತಿಯೊಬ್ಬರಿಗೂ ಉಣಲು ಉಡಲು ಸಾಕಷ್ಟು ವಸ್ತುಗಳು ಸಿಗಬೇಕು. ಹಾಗೆಯೇ ಜನಕೋಟಿಗೆ ತಮ್ಮ ತಮ್ಮ ಮನೆಗಳಲ್ಲೆ ದುಡಿಮೆ ಒದಗಿಸಿಕೊಡುವುದೇ ಸ್ವದೇಶಿ ಎಂಬುದಾಗಿ ಗಾಂಧಿ ಹೇಳುತ್ತಿದ್ದರು."[7] ಹಳ್ಳಿಗಳಲ್ಲಿ ಅನೇಕರಿಗೆ ವರ್ಷದಲ್ಲಿ ನಾಲ್ಕು ತಿಂಗಳು ಸಹ ಕೆಲಸವಿರುವುದಿಲ್ಲ. ಅಂತಹವರಿಗೆ ಅವರಿರುವಲ್ಲೆ ಕೈತುಂಬಾ ಕೆಲಸ ಒದಗಿಸಬೇಕು. ಯಂತ್ರೋದ್ಯಮವು ಲಕ್ಷಾಂತರ ಜನರ ಕೈಕಸುಬುಗಳನ್ನು ಕಿತ್ತುಕೊಂಡಿದೆ. ಹಳ್ಳಿಯ ಚಮ್ಮಾರ, ಕಮ್ಮಾರ, ಡೊಂಬರ, ಕುಂಬಾರ, ಬಡಿಗಾರ ಎಲ್ಲರೂ ನಗರಗಳ ಬೃಹತ್ ಯಂತ್ರಗಳ ಪೈಪೋಟಿಯಿಂದಾಗಿ ನಿರುದ್ಯೋಗಿಗಳಾಗಿದ್ದಾರೆ, ಬೀದಿ ಭಿಕಾರಿಗಳಾಗಿದ್ದಾರೆ. ಹತ್ತುಜನರ ಕೆಲಸವನ್ನು ಒಂದು ಯಂತ್ರಮಾಡಿ ಒಂಬತ್ತು ಜನರನ್ನು ನಿರುದ್ಯೋಗಿಗಳನ್ನಾಗಿಸುತ್ತದೆ.

ಪಟ್ಟಣ ಪ್ರದೇಶಗಳಲ್ಲಿ ವಾಸಮಾಡುತ್ತಿರುವ ಡೊಂಬರು ಹಳ್ಳಿಯ ಕೃಷಿಕಾರ್ಮಿಕರಿಗಿಂತ, ಆರ್ಥಿಕ ಕ್ಷೇತ್ರದಲ್ಲಿ ಸ್ವಲ್ಪ ಚೇತರಿಸಿಕೊಂಡಿದ್ದಾರೆ. ಇದಕ್ಕೆ ಹಲವಾರು ಕಾರಣಗಳನ್ನು ಸೂಚಿಸಬಹುದು. ಕೂಡ್ಲಿಗೆ ಸಂಡೂರು, ಹೊಸಪೇಟೆಯಂತಹ ಪಟ್ಟಣ ಪ್ರದೇಶಗಳಲ್ಲಿ ನೆಲೆಯೂರಿರುವ ಈ ಜನರು ಚಿಕ್ಕಪುಟ್ಟ ವ್ಯಾಪಾರಗಳಲ್ಲಿ ತೊಡಗಿಕೊಂಡಿದ್ದಾರೆ. ಬೇಲ್ದಾರು ಕೆಲಸ ಮಾಡುತ್ತಿದ್ದಾರೆ. ಇನ್ನೂ ಹಲವರು ಖಾಸಗಿ ಕಂಪನಿಗಳಲ್ಲಿ ದಿನಗೂಲಿಗಳಾಗಿ ದುಡಿಯುತ್ತಿದ್ದಾರೆ. ಕೆಲವೇ ಕೆಲವರು ಸರ್ಕಾರಿ ನೌಕರಿಯಲ್ಲಿದ್ದಾರೆ. ಹೀಗೆ ಈ ಮೇಲಿನ ಉದ್ಯೋಗಗಳಲ್ಲಿ ತೊಡಗಿಕೊಂಡಿರುವ ಸಮುದಾಯದ ಜನರ ಜೀವನ ಮಟ್ಟದಲ್ಲಿ ಸುಧಾರಣೆಯಾಗಿದೆ. ಅಲ್ಲದೆ ಇಂತವರ ಆರ್ಥಿಕ ಸ್ಥಾನಮಾನಗಳು ಕೂಡ ಸುಧಾರಿಸಿವೆ.

ಹಳ್ಳಿಯಲ್ಲಿ ಬೇಸಾಯದಲ್ಲಿ ತೊಡಗಿಕೊಂಡಿರುವ ಮತ್ತು ಕುರಿ, ಮೇಕೆ, ಆಕಳು, ಎಮ್ಮೆ ಮುಂತಾದ ಸಾಕುಪ್ರಾಣಿಗಳ ಕಸುಬುಗಳಲ್ಲಿ ತೊಡಗಿಕೊಂಡಿರುವ ಡೊಂಬರ ದೈನಂದಿನ ಅವಶ್ಯಕ ಮೂಲಭೂತ ಸೌಲಭ್ಯಗಳನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಹೀಗಾಗಿ ಶ್ರಮಕ್ಕೆ ತಕ್ಕಂತೆ ಜೀವನ ನಡೆಯುತ್ತದೆ. ಈ ಸಮುದಾಯದ ಜೀವನಮಟ್ಟವನ್ನು ಇತರ ಸಮುದಾಯಗಳೊಂದಿಗೆ ಹೋಲಿಸಿದರೆ, ಡೊಂಬರ ಸಮುದಾಯದವರ ಜೀವಮಟ್ಟ ತುಂಬಾ ಹಿಂದುಳಿದಿರುವುದು ಕಂಡುಬರುತ್ತದೆ. ಭೂಮಾಲಿಕ ಸಮುದಾಯ ಗಳು ಅಧಿಕ ಭೂಮಿಯನ್ನು ಹೊಂದಿದವರಾಗಿದ್ದು ಜೊತೆಗೆ ಆಧುನಿಕ ಬೇಸಾಯ ಪದ್ಧತಿಯನ್ನೆ ಅನುಸರಿಸುವ ಮೂಲಕ ಅಧಿಕ ಉತ್ಪಾದನೆ ಮಾಡಿ ಬೆಲೆ ಅಧಿಕವಿದ್ದಾಗ ಮಾರಾಟಮಾಡುತ್ತಾರೆ. ಇದರಿಂದಾಗಿ, ಇವರ ಆರ್ಥಿಕ ಸ್ಥಾನಮಾನಗಳು ಡೊಂಬರ ಸಮುದಾಯಗಳಿಗಿಂತ ಬಹಳಷ್ಟು

ಉತ್ತಮಗೊಂಡಿದೆ. ಒಟ್ಟಾರೆಯಾಗಿ ಡೊಂಬರ ಸಮುದಾಯದಲ್ಲಿ ಕೃಷಿಕೂಲಿಗಳಾಗಿ ದುಡಿಯುವವರು ಶೇ. ೮೪ರಷ್ಟು ಜನರು ಬಡತನ ರೇಖೆಯ ಕೆಳಗೆ ಬರುತ್ತಾರೆ.

### ೯. ವರ್ತಮಾನದಲ್ಲಿ ಈ ಸಮುದಾಯವು ಎದುರಿಸುತ್ತಿರುವ ಸಮಸ್ಯೆಗಳು

ಡೊಂಬರ ಸಮುದಾಯವು ಪ್ರಸ್ತುತ ಸಂದರ್ಭದಲ್ಲಿ ಹತ್ತುಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದೆ. ಇದಕ್ಕೆ ಕಾರಣ ಭಾರತದ ಒಟ್ಟು ರಾಜಕೀಯ, ಆರ್ಥಿಕ ನೀತಿಗಳೇ ಕಾರಣವೆನ್ನಬೇಕಾಗುತ್ತದೆ. ಸ್ವಾತಂತ್ರ್ಯ ಬಂದಮೇಲೆ ಪ್ರಜಾಪ್ರಭುತ್ವದ ಹೆಸರಲ್ಲಿ ಅಧಿಕಾರಕ್ಕೆ ಬಂದವರು ಈ ಬಗೆಯ ಸಮುದಾಯಗಳನ್ನು ಗುರುತಿಸಿ ಅವುಗಳ ಕಲ್ಯಾಣಕ್ಕಾಗಿ ಸೂಕ್ತ ಯೋಜನೆಗಳನ್ನು ಹಮ್ಮಿಕೊಳ್ಳಬಹುದಿತ್ತು. ಆದರೆ ರೂಪಿಸಿದ ಯೋಜನೆಗಳು ಇಂದಿನ ವ್ಯವಸ್ಥೆಯಲ್ಲಿ ಸರಿಯಾಗಿ ಅನುಷ್ಠಾನಗೊಳ್ಳದೆ ಈ ಸಮುದಾಯಗಳು ಇನ್ನೂ ಆದಿಮ ಹಂತದಲ್ಲಿಯೇ ಮುಂದುವರೆಯುವಂತಾಗಿದೆ.

ಇಂದು ಈ ಸಮುದಾಯವು ನಾಗರೀಕ ಕುಟುಂಬಗಳೊಂದಿಗೆ ನೆಲೆನಿಂತುಕೊಂಡು, ತನ್ನ ಬದುಕನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಆದರೆ ಇದು ಸಾಧ್ಯವಾಗುತ್ತಿಲ್ಲ. ಡೊಂಬರ ಸಮುದಾಯದ ಪೂರ್ವಜರು ಅಲೆಮಾರಿಗಳಾಗಿದ್ದರಿಂದ, ಅಂದಿನ ಆಸ್ತಿಗಳಾದ ನಿವೇಶನ, ವಸತಿ ಭೂಮಿಗಳನ್ನು ಮುಂದಿನ ಪೀಳಿಗೆಗೆ ಬಿಟ್ಟು ಹೋಗಿಲ್ಲ. ಇದರಿಂದಾಗಿ ವರ್ತಮಾನದಲ್ಲಿ ಡೊಂಬರ ಸಮುದಾಯವು ಮೂಲಭೂತ ಸೌಲಭ್ಯಗಳಾದ ನಿವೇಶ, ವಸತಿ ಮತ್ತು ಭೂಮಿ, ಉದ್ಯೋಗದ ಬಹುದೊಡ್ಡ ಸಮಸ್ಯೆಯನ್ನು ಎದುರಿಸುತ್ತಿದೆ. ಇಂದು ಸರ್ಕಾರದಿಂದ ಬರುವ ಆಶ್ರಯಮನೆ, ನಿವೇಶನ, ಭೂಮಿ ಭಾಗ್ಯಜ್ಯೋತಿ, ಉದ್ಯೋಗಕ್ಕೆ ಸಂಬಂಧಿಸಿದಂತೆ, ಕರ್ನಾರಹಟ್ಟಿ, ಮರಬನಹಳ್ಳಿ, ಸುವೇನಹಳ್ಳಿ, ಮುಂತಾದ ಕಡೆ ವಾಸ ಮಾಡುತ್ತಿರುವ ಡೊಂಬರ ಸಮುದಾಯದವರೆಗೆ ಪಡೆಯಲಾಗುತ್ತಿಲ್ಲ. ಇಂದು ಅಲ್ಲಿ ವಾಸಮಾಡುವ ಈ ಸಮುದಾಯದ ಅನೇಕರಿಗೆ ಮನೆಗಳೇ ಇಲ್ಲ. ಕೆಲವರು ಹುಲ್ಲಿನ ಗುಡಿಸಲುಗಳನ್ನೆ ಹಾಕಿಕೊಂಡಿದ್ದಾರೆ. ಮಳೆ ಬಂದರೆ ಇಡೀ ರಾತ್ರಿಯೆಲ್ಲ ಜಾಗರಣೆ ಮಾಡುತ್ತಾರಂತೆ.

ನಿರಂತರ ಅಲೆಮಾರಿಯಾಗಿದ್ದ ಈ ಸಮುದಾಯ ಇಂದು ಶೈಕ್ಷಣಿಕ ಸಮಸ್ಯೆಯನ್ನೆ ಎದುರಿಸುತ್ತಿದೆ. ಶಿಕ್ಷಣ ಪಡೆಯಲು ಸಾಧ್ಯಾವಾಗದ ಸಮಾಜದ ಅನಿವಾರ್ಯಗಳೆಂದರೆ

- ನಿರಂತರ ಅಲೆಮಾರಿತನ
- ಅಲೆಮಾರಿತನಕ್ಕೆ ಕಾರಣ ಬಡತನ
- ಮೇಲುವರ್ಗದರು ಮಾತ್ರ ಶಿಕ್ಷಣ ಪಡೆಯಲು ಆ ಜನರು ನಾವು ಕಲಿಯಬಾರದು ಎಂಬ ಪೂರ್ವಗ್ರಹ ಇವರಲ್ಲಿದೆ.

➢ ನಿಶ್ಚಿತ ಆದಾಯ ಮೂಲವಿಲ್ಲದೆ ನೆಲೆ ನಿಲ್ಲಲಾಗದ ಅನಿವಾರ್ಯತೆ.

➢ ಕುಟುಂಬದಲ್ಲಿ ಹಿರಿಯರ ಪ್ರೋತ್ಸಾಹದ ಕೊರತೆ.

➢ ನೆಲೆ ನಿಂತರೂ ಮಕ್ಕಳನ್ನು ಶಾಲೆಗೆ ಕಳುಹಿಸಲಾಗದಂತಹ ಆರ್ಥಿಕ ಸ್ಥಿತಿಗತಿ

➢ ಸಮುದಾಯದ ಪರಿಸರದಲ್ಲಿ ಇತರೆ ಮಕ್ಕಳು ಶಾಲೆಗೆ ಹೋಗದಿರುವುದರಿಂದ ಶಾಲೆಗೆ ಹೋಗುತ್ತಿದ್ದ ಮಕ್ಕಳು ಸಹ, ಶಾಲೆ ಬಿಡುವ ಅನಿವಾರ್ಯತೆ ತಲೆದೂರಿದೆ.

➢ ಸರ್ಕಾರದ ಪ್ರೋತ್ಸಾಹ ಕಡಿಮೆಯಾಗುತ್ತಿರುವುದು.

➢ ಶಾಲೆಗಳಲ್ಲಿ ಬೋಧನೆಯ ಗುಣಮಟ್ಟದ ಕೊರತೆ.

➢ ಶಿಕ್ಷಣ ಪಡೆದರೂ ಉದ್ಯೋಗವಿಲ್ಲ ಎಂಬ ಕೊರಗು.

ಮೇಲಿನ ಎಲ್ಲಾ ಅನಿವಾರ್ಯತೆಗಳಿಂದಾಗಿ ಶೈಕ್ಷಣಿಕ ಸಮಸ್ಯೆಯನ್ನು ಸಮುದಾಯವು ಎದುರಿಸುತ್ತಿದೆ.

ಸಮುದಾಯ ಎದುರಿಸುತ್ತಿರುವ ಬಹುಮುಖ್ಯ ಸಮಸ್ಯೆಗಳಲ್ಲಿ ಮೀಸಲಾತಿ ಸಮಸ್ಯೆಯೂ ಒಂದಾಗಿದೆ. ಈ ಸಮುದಾಯವು ಪರಿಶಿಷ್ಟ ಜಾತಿ ಪಟ್ಟಿಯಲ್ಲಿದೆ. ಆದರೆ ಪರಿಶಿಷ್ಟ ಜಾತಿಯ ಮೀಸಲಾತಿಯ ಪ್ರಕಾರ ಸಾರ್ಕಾರವು ಹಲವಾರು ಸೌಲಭ್ಯಗಳನ್ನೇನು ಒದಗಿಸುತ್ತಲೇ ಇದೆ. ಆದರೆ, ಸಂಪೂರ್ಣವಾಗಿ ಈ ಸೌಲಭ್ಯಗಳನ್ನ ಇತರೆ ಸಮುದಾಯಗಳಾದ ಲಂಬಾಣಿ, ವಡ್ಡರು, ಹೊಲೆಯರು, ಮಾದಿಗರು ಹೆಚ್ಚಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ ಎನ್ನುತ್ತಾರೆ ನಾಗರಹುಣಸೆ ನೀಲಮ್ಮ ಮತ್ತು ಡಿ. ಹುಲುಗಪ್ಪ. ಇದರಿಂದ ಡೊಂಬರ ಸಮುದಾಯಕ್ಕೆ ಅನ್ಯಾಯವಾಗುತ್ತಿದೆ.

೧. ವಸತಿ, ಭೂಮಿ, ಪಡಿತರ ಚೀಟಿ, ಈ ಮೂಲಭೂತ ಸಮಸ್ಯೆಗಳು.

೨. ರೋಜಗಾರ ಯೋಜನೆ, ಗಂಗಾಕಲ್ಯಾಣ ಯೋಜನೆ, ಬ್ಯಾಂಕ್‌ಸಾಲ ಮುಂತಾದ ಅಭಿವೃದ್ಧಿ ಯೋಜನೆಗಳು, ಈ ಸಮುದಾಯದ ಕೈಗೆ ನಿಲುಕದಿರುವುದು.

೩. ಜಾತಿ ಪ್ರಮಾಣಪತ್ರ ಮತ್ತು ಮಕ್ಕಳಿಗೆ ಶಾಲೆಯಲ್ಲಿ ಶಿಷ್ಯವೇತನದ ಸಮಸ್ಯೆ.

೪. ರಾಜಕೀಯವಾಗಿ ತೀರ ಹಿಂದುಳಿದಿದ್ದಾರೆ.

೫. ಅವಿಭಕ್ತ ಕುಟುಂಬ ಪದ್ಧತಿ ಜಾರಿಯಲ್ಲಿದೆ.

೬. ಸಾಮಾಜಿಕವಾಗಿ, ಕೀಳರಿಮೆ, ಅಂಜಿಕೆ ಇನ್ನು ಇದೆ.

೭. ಪರಿಶಿಷ್ಟ ಜಾತಿಯಲ್ಲಿಯೇ, ಅಧಿಕ, ಜನಸಂಖ್ಯೆ ಇರುವ ಸಮುದಾಯಗಳೊಡನೆ ಪೈಪೋಟಿ ನಡೆಸಲು ಆಗುತ್ತಿಲ್ಲ. ಉದಾ. ಲಂಬಾಣಿ, ಹೊಲೆಯರು, ಮಾದಿಗರು, ವಡ್ಡರು.

೮. ಜನಸಂಖ್ಯೆಗೆ ಅನುಗುಣವಾಗಿ, ರಾಜಕೀಯ ಉದ್ಯೋಗ ಮೀಸಲಾತಿ ಕಲ್ಪಿಸಿಕೊಡಬೇಕು.

೯. ಶೈಕ್ಷಣಿಕ ಸಮಸ್ಯೆಗಳು.

೧೦. ಆರ್ಥಿಕ ಸಮಸ್ಯೆಗಳು.

೧೧. ಈ ಸಮುದಾಯದಲ್ಲಿ ಸುಮಾರು ಶೇ. ೭೫ ರಷ್ಟು ಕುಟುಂಬಗಳು ಬಡತನ ರೇಖೆಗಿಂತ ಕೆಳಗೆ ಜೀವನ ಮಾಡುತ್ತಿದ್ದಾರೆ.

೧೨. ಈ ಸಮುದಾಯದ ಮೇಲೆ ಇತರ ಬಲಿಷ್ಠ ಸಮುದಾಯಗಳು ದೌರ್ಜನ್ಯ ಮಾಡುತ್ತಾರೆ.

೧೩. ಸರ್ಕಾರವು ಇಂಥ, ಅಲೆಮಾರಿ ಡೊಂಬರ ಸಮುದಾಯದ ಸಲುವಾಗಿ ವಿಶೇಷವಾದ ಯೋಜನೆಗಳನ್ನು ಇದುವರೆಗೂ ರೂಪಿಸದೆ ಇರುವುದು ಸೂಜಿಗ ಸಂಗತಿಯೇ ಆಗಿದೆ.

೧೪. ಇನ್ನು ಈಗಲೂ ಹಳೆಯ ಸಂಪ್ರದಾಯ, ಮೂಢನಂಬಿಕೆ, ಆಚಾರವಿಚಾರದಲ್ಲಿಯೇ ತೊಡಗಿದ್ದಾರೆ.

೧೫. ಅಂಗವಿಕಲರಿಗೆ ವೃದ್ಧರಿಗೆ, ವಿಧವೆಯರಿಗೆ, ದೇವದಾಸಿಯರಿಗೆ, ಇದುವರೆಗೂ ಈ ಸಮುದಾಯ ದವರಿಗೆ, ಯಾವ ಸಹಾಯ ಧನ, ಒದಗಿಸಿಲ್ಲ.

ಡೊಂಬರ ಸಮುದಾಯದಲ್ಲಿ ಅನಕ್ಷರಸ್ಥರ ಸಂಖ್ಯೆ ಅಧಿಕವಾಗಿರುವುದರಿಂದ ಸರಕಾರವು ಒದಗಿಸುವ ಮೂಲಭೂತ ಸೌಲಭ್ಯಗಳಾದ ಪಡಿತಿರ ಚೀಟಿ, ಆಶ್ರಯ ವಸತಿ, ವೃದ್ಧಾಪ್ಯ ವೇತನ, ವಿಧವಾ ವೇತನ, ಅಂಗವಿಕಲರ ವೇತನ, ಸಾಲಸೌಲಭ್ಯಗಳಿಂದ ಮುಂತಾದವುಗಳನ್ನು ಪಡೆಯುವಲ್ಲಿ ವಂಚಿತರಾಗಿದ್ದಾರೆ. ಹಾಗೆ ರಾಜಕೀಯವಾಗಿ ಈ ಸಮುದಾಯವು ತೀರಾ ಹಿಂದುಳಿದಿದೆ. ಇದಕ್ಕೆ ಕಾರಣಗಳೆಂದರೆ ಪ್ರಸ್ತುತ ಬಳ್ಳಾರಿ ಜಿಲ್ಲೆಯಲ್ಲಿ ಡೊಂಬರ ಸಮುದಾಯವು ಅಲ್ಪಸಂಖ್ಯಾತ ಸಮುದಾಯವಾಗಿದೆ. ಇವರಿಗೆ ರಾಜಕೀಯ ವಿಷಯ ಕುರಿತಂತೆ ಯಾವುದೇ ರೀತಿಯಾದ ಧ್ವನಿ ಎತ್ತುವಂತಿಲ್ಲ. ಹೀಗಾಗಿ ಯಾವುದೇ ಸಮುದಾಯವು ರಾಜಕೀಯವಾಗಿ ದೂರ ಉಳಿದಿದೆಯೆಂದರೆ, ಅಂತಹ ಸಮುದಾಯಗಳು ಏಳಿಗೆ ಸಾಧ್ಯವೇ ಇಲ್ಲವೆಂದು ಹೇಳಬಹುದು. ಹೇಗೆಂದರೆ ಇಂದಿನ ಜಾತಿಕೇಂದ್ರಿತ ರಾಜಕಾರಣವು, ತನ್ನ ಜಾತೀಯ ಜನಾಂಗದ ಕಾಳಜಿಯೇ ಮುಖ್ಯವೆಂದು ಆ ಜಾತಿಯ ಬೆನ್ನುಲೆಬುವಾಗಿ ಕೆಲಸ ಮಾಡುತ್ತಿರುತ್ತದೆ.

ಡೊಂಬರ ಸಮುದಾಯದ ಸಾಮಾಜಿಕ ಸ್ಥಾನಾಮಾನಗಳು ಕೆಲವು ಕಡೆ ಉತ್ತಮವಾಗಿಯೇ ಇವೆ. ಆದರೆ ತೀರ ಹಿಂದುಳಿದ ಹಳ್ಳಿಗಳಾದ ಡೊಂಬರಹಟ್ಟಿ ಕರ್ನಾರಹಟ್ಟಿ ಮತ್ತು ನಾಗರಹುಣಸೆ, ನರಸಾಪುರದಂತ ಕಡೆ ಡೊಂಬರ ಸಾಮಾಜಿಕ ಸ್ಥಾನಮಾನಗಳು ಇನ್ನೂ ಉತ್ತಮಗೊಂಡಿಲ್ಲ. ಈ ಸಮುದಾಯವು ಜಾಗತೀಕರಣದಂತಹ ಸಂದರ್ಭದಲ್ಲಿ ಶೈಕ್ಷಣಿಕ ಸ್ಥಾನಮಾನಗಳಿಂದ ತೀರ ಹಿಂದುಳಿದಿದೆ. ಇದಕ್ಕೆ ಕಾರಣ ಸಮುದಾಯವು ಈ ಹಿಂದೆ ನಿರಂತರ ಅಲೆಮಾರಿಯಾಗಿ ಸುತ್ತಾಡುವ ಕಾಲಗಟ್ಟದಲ್ಲಿ ಶಿಕ್ಷಣದ ಅರಿವೇ

ಮೂಡಿರಲಿಲ್ಲ. ಇಂದು ನೆಲೆನಿಂತ ಸಂದರ್ಭದಲ್ಲಿ ಸಮುದಾಯವು ಅನೇಕ ಆರ್ಥಿಕ ಸಂಕಷ್ಟಗಳಿಂದ ಬಳಲುತ್ತಿರುವ ಹಿನ್ನೆಲೆಯಲ್ಲಿ ತಮ್ಮ ಹೊಟ್ಟೆ ತುಂಬಿಸಿಕೊಳ್ಳುವುದೇ ಮುಖ್ಯವಾಗಿದೆ. ಹೀಗಿದ್ದಾಗ ಶಿಕ್ಷಣ ಪಡೆಯುವಂತ ಮಾತು ಕನಸಾಗಿಯೇ ಉಳಿದಿದೆ. ಈ ಕಾರಣದಿಂದ ಈ ಸಮುದಾಯದ ಸರ್ವಪ್ರಯತ್ನದ ಜೊತೆಗೆ ಹಲವು ವಿಶೇಷ ಯೋಜನೆಗಳಿಂದ ಇಂತಹ ತೀರಾ ಹಿಂದುಳಿದ ಸಮುದಾಯಗಳನ್ನು ಮೇಲೆತ್ತುವ ಪ್ರಯತ್ನ ಸರಕಾರವು ಮಾಡಬೇಕಾಗಿದೆ.

ಇನ್ನು ಬಳ್ಳಾರಿ ಜಿಲ್ಲೆಯಲ್ಲಿನ ನಾಲ್ಕು ತಾಲೂಕುಗಳಲ್ಲಿ ವಾಸ ಮಾಡುತ್ತಿರುವ ಡೊಂಬರನ್ನು ಕ್ಷೇತ್ರಕಾರ್ಯದ ಮೂಲಕ ಹಲವು ಸಲ ಭೇಟಿಯಾಗಿದ್ದೇನೆ. ನನ್ನ ಕ್ಷೇತ್ರಕಾರ್ಯದ ಯಥಾವತ್ತು ವರದಿಯನ್ನು ಇಲ್ಲಿ ಕೊಡುತ್ತಿದ್ದೇನೆ.

❑❑

**ಟಿಪ್ಪಣಿಗಳು**

೧. ಗಾಂಧಿಯ ಅರ್ಥಶಾಸ್ತ್ರ, ಅನು. ಎಚ್.ಎಂ. ಮರುಳಸಿದ್ಧಯ್ಯ, ಪು.೩೪

# ಸಮಾರೋಪ

ಪ್ರಸ್ತುತ ಅಧ್ಯಯನದಲ್ಲಿ ಡೊಂಬರ ಬದಲಾಗುತ್ತಿರುವ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯ ಕುರಿತು ವಿಶ್ಲೇಷಣೆ ಮಾಡಲಾಗಿದೆ. ಮೊದಲನೆ ಅಧ್ಯಯದಲ್ಲಿ ಡೊಂಬರ ಚಾರಿತ್ರಿಕ ಹಿನ್ನೆಲೆಗೆ ಸಂಬಂಧಿಸಿದಂತೆ ಅವರ ಆದಿಮ ಅಲೆಮಾರಿ ಬದುಕಿನ ವಿವರಣೆಯನ್ನು ನೀಡಲಾಗಿದೆ. ಹಾಗೂ ಹಿಂದಕ್ಕೆ ಅಲೆಮಾರಿಗಳಾಗಿದ್ದ ಡೊಂಬರು ಇಂದು ಒಂದು ಕಡೆ ನೆಲೆ ನಿಂತಿದ್ದರಿಂದಾಗಿ ವರ್ತಮಾನದಲ್ಲಿ ಕೈಗೊಂಡಿರುವ ಇತರೆ ಕಸುಬುಗಳಾದ ಕೃಷಿ ಮತ್ತು ಕೃಷಿ ಕಾರ್ಮಿಕರಾಗಿಯೇ, ಬೇಲ್‌ದಾರುಗಳಾಗಿಯೇ ಹಾಗೆ ಇತರೆ ಕರಕುಶಲ ಕಲೆಗಳನ್ನು ಸಹ ರೂಢಿಸಿಕೊಂಡಿರುತ್ತಾರೆ. ಅಲ್ಲದೆ ಖಾಸಗಿ ಕಂಪನಿಗಳಲ್ಲಿಯೂ ದುಡಿಯುತ್ತಿದ್ದಾರೆ. ಇದು ಈ ಸಮುದಾಯದ ಬಹುದೊಡ್ಡ ಬದಲಾವಣೆಗಳಲ್ಲೊಂದಾಗಿದೆ ಎಂದು ಮೇಲಿನ ಕಸುಬುಗಳೇ ಆಧಾರವಾಗಿವೆ.

ಹಾಗೆ ವರ್ತಮಾನದ ಸಂದರ್ಭದಲ್ಲಿ ಡೊಂಬರ ಸಮುದಾಯದ ಸ್ಥಾನಮಾನಗಳು ಇತರೆ ಸಮುದಾಯಗಳೊಂದಿಗೆ ಹೋಲಿಸಿ ನೋಡಿದಾಗ ಡೊಂಬರ ಸಮುದಾಯ ಮತ್ತು ಇತರೆ ಸಮುದಾಯಗಳ, ಮಧ್ಯೆ ಯಾವುದೆ ಭಿನ್ನ ಬೇಧವಿಲ್ಲದೆ ಪರಸ್ಪರ ಹೊಂದಿಕೊಂಡು ಸಹಜೀವನ ನಡೆಸಲು ಆರಂಭಿಸಿದ್ದಾರೆ. ಹಾಗೂ ವರ್ತಮಾನದಲ್ಲಿ ಡೊಂಬರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಹೇಳಿಕೊಳ್ಳುವಷ್ಟು ಉತ್ತಮವಾಗಿಯೇನು ಇಲ್ಲವೆಂದು ಹೇಳಬಹುದು. ಡೊಂಬರ ಸಮುದಾಯದಲ್ಲಿ ಬೆರಳಣಿಕೆಯ ಕುಟುಂಬಗಳು ಮಾತ್ರ ಭೂಮಿಯನ್ನು ಹೊಂದಿದ್ದಾರೆ. ಉಳಿದಂತೆ ಬಹುಸಂಖ್ಯಾತರು ಭೂಹೀನರಾಗಿದ್ದಾರೆ. ಇದರಿಂದಾಗಿ ಆರ್ಥಿಕ ಸಂಕಷ್ಟದಿಂದ ಬಳಲುತ್ತಿದ್ದಾರೆ. ಶೈಕ್ಷಣಿಕ ಸ್ಥಾನಮಾನಗಳಿಗೆ ಸಂಬಂಧಿಸಿದಂತೆ ಇವರಲ್ಲಿ ಇತ್ತೀಚಿಗೆ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಶುರು ಮಾಡಿದ್ದಾರೆ. ಇಂದಿನ ಜಾಗತೀಕರಣ ಮತ್ತು ಬದಲಾಗುತ್ತಿರುವ ಜಾಗತೀಕ ವಿದ್ಯಾಮಾನಗಳ ಸಂದರ್ಭದಲ್ಲಿ ಶಿಕ್ಷಣದಿಂದಲೇ ದೂರ ನಿಂತುಕೊಂಡಿರುವ ಈ ಸಮುದಾಯವು ಮೇಲಿನ ವಿದ್ಯಮಾನಗಳ ಸಂದರ್ಭಕ್ಕೆ ಹೊಂದಿಕೊಳ್ಳುವುದು ಇವರಿಗೆ ಸಾಧ್ಯವಾಗುತ್ತಿಲ್ಲ.

ಭಾರತದಂತ ಶ್ರೇಣಿಕೃತ ವ್ಯವಸ್ಥೆಯಲ್ಲಿ ಡೊಂಬರ ಸಮುದಾಯವು ಕೂಡ ಕೆಳಸ್ತರದಲ್ಲಿಯೇ ಇದೆ. ಅಲ್ಪಸಂಖ್ಯಾತವಾದ ಈ ಸಮುದಾಯವು ಸರ್ಕಾರಿ ಸೌಲಭ್ಯಗಳಾದ, ನಿವೇಶನ, ವಸತಿ, ಭೂಮಿ,

ಉದ್ಯೋಗ ಸಾಲಸೌಲಭ್ಯಗಳನ್ನು ಪಡೆಯುವಲ್ಲಿ ಸಮುದಾಯವು ಸಂಪೂರ್ಣವಾಗಿ ವಿಫಲವಾಗಿದೆ. ಡೊಂಬರ ಕೇರಿಗಳಲ್ಲಿ ಸಮುದಾಯ ಭವನಗಳು ಇಲ್ಲದಿರುವುದು ಮತ್ತು ದೇವಸ್ಥಾನದಂತಹ, ಶೌಚಾಲಯದಂತಹ ಕಟ್ಟಡಗಳು ನಿರ್ಮಿಸದೇ ಇರುವುದು ಸರಕಾರದ ನಿರ್ಲಕ್ಷತೆಯೇ ಕಾರಣವೆಂದು ಹೇಳಬಹುದು. ಹೀಗೆ ಸಮುದಾಯವು ಹತ್ತು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದೆ.

ಡೊಂಬರಲ್ಲಿ ಇಂದು ಸಂಘಟನೆಯ ಸಾಮರ್ಥ್ಯದ ಕೊರತೆಯಿಂದಾಗಿ ಜತೆಗೆ ಸರ್ಕಾರದ ನಿರ್ಲಕ್ಷತೆ ಯಿಂದಾಗಿ ಸಮುದಾಯವು ಹೀಗೆ ಅನೇಕ ತೊಂದರೆಗಳಿಗೆ ಸಿಲುಕಿ ದಿಕ್ಕು ತಪ್ಪುವಂತಾಗಿದೆ. ಇಂತಹ ಪರಿಸ್ಥಿತಿಯ ಕಡೆಗೆ ಸರ್ಕಾರವು ದೃಷ್ಟಿ ಹಾಯಿಸುವುದರೊಂದಿಗೆ ವಿಶೇಷವಾದ ಯೋಜನೆಗಳನ್ನು ರೂಪಿಸುವ ಮೂಲಕ ಹಿಂದುಳಿದ ಸಮುದಾಯಗಳನ್ನು ಮೇಲೆತ್ತುವ ಪ್ರಯತ್ನ ಮಾಡುವುದು ಸೂಕ್ತವೆನಿಸುತ್ತದೆ.

ಪ್ರಜಾಪ್ರಭುತ್ವದ ದೃಷ್ಟಿಯಿಂದಾದರೂ ಸರ್ಕಾರವು ಸಮುದಾಯ ಸಮುದಾಯಗಳ ಮಧ್ಯೆಯಿರುವ ಅಸಮಾನತೆಗಳನ್ನು ನಿವಾರಿಸುವ ಕಡೆಗೆ ದಿಟ್ಟ ಹೆಜ್ಜೆಯಿಡುವ ಮೂಲಕ ಸಾಮಾಜಿಕ ನ್ಯಾಯ ಸ್ಥಾಪನೆಗೆ ಮುಂದಾಗಬೇಕಾಗಿದೆ.

ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲೆಯ ಡೊಂಬರ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳನ್ನು ಚರ್ಚೆಗೆ ಒಳಪಡಿಸುವ ಉದ್ದೇಶವನ್ನು ಹೊಂದಿದೆ. ಭಾರತವನ್ನು ಆಳಿಕೊಂಡು ಬಂದ ಪ್ರಭುತ್ವಗಳ ಕಾಲಘಟ್ಟಗಳಲ್ಲಿ ಪ್ರದರ್ಶನ ಕಲೆಯನ್ನೇ ಅವಲಂಬಿಸಿಕೊಂಡು ಬಂದ ಸಮುದಾಯವೊಂದು ಯಾವ ಯಾವ ರೂಪಾಂತರಗಳ ಮೂಲಕ ಹಾದು ಬಂದಿದೆ? ಈ ಸ್ಥಿತ್ಯಂತರಗಳಿಗೆ ಸದರಿ ಸಮುದಾಯದ ಚಾರಿತ್ರಿಕ ಬೆಳವಣಿಗೆಗಳಲ್ಲಿ ಯಾವ ಯಾವ ಕಾರಣಗಳಿವೆ? ಒಂದು ಅಲೆಮಾರಿ ಸಮುದಾಯವು ವರ್ತಮಾನದಲ್ಲಿ ಯಾವ ಸಮಸ್ಯೆಗಳನ್ನು ಎದುರಿಸುತ್ತಿವೆ? ಜಾಗತೀಕರಣದಂತಹ ಈ ಸಂದರ್ಭದಲ್ಲಿ ಅಲೆಮಾರಿ ಸಮುದಾಯವೊಂದು ವರ್ತಮಾನಕ್ಕೆ ಯಾವ ಬಗೆಯಲ್ಲಿ ಮುಖಾಮುಖಿಯಾಗುತ್ತಿದೆ? ಪ್ರಸ್ತುತ ಸಂದರ್ಭದಲ್ಲಿ ಅಲೆಮಾರಿಗಳ ಕಲ್ಯಾಣ ಸಾಧಿಸಲು ಸರಕಾರ ಯಾವ ಬಗೆಯ ಕ್ರಮಗಳನ್ನು ಕೈಗೊಳ್ಳಬಹುದು? ಎಂಬ ಪ್ರಶ್ನೆಗಳನ್ನು ಈ ಅಧ್ಯಯನದ ಉದ್ದಕ್ಕೂ ಕೇಳಿಕೊಳ್ಳಲಾಗಿದೆ.

ಕ್ಷೇತ್ರಕಾರ್ಯದಲ್ಲಿ ನಾನು ಪಡೆದ ಮೂಲ ಮಾಹಿತಿಯನ್ನೇ ಬಹುಪಾಲು ನೆಚ್ಚಿಕೊಂಡು ಇಲ್ಲಿನ ಅಧ್ಯಾಯಗಳನ್ನು ಬರೆಯಲಾಗಿದೆ. ಅನುಷಂಗಿಕವಾಗಿ ಸಾಹಿತ್ಯಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಸತತ ಮೂರು ತಿಂಗಳ ಕಾಲ ಎರಡೆರಡು ಸಲ ಬಳ್ಳಾರಿ ಜಿಲ್ಲೆಯ ನಾಲ್ಕು ತಾಲೂಕುಗಳಲ್ಲಿ ಕ್ಷೇತ್ರಕಾರ್ಯ ಮಾಡಲಾಗಿದೆ. ಡೊಂಬರ ಸ್ಥಿತಿಗತಿಯ ಕುರಿತು ದೀರ್ಘವಾಗಿ ಸದರಿ ಸಮುದಾಯದ ಜೊತೆ

ಚರ್ಚಿಸಲಾಗಿದೆ. ಅಲ್ಲದೆ ಕ್ಷೇತ್ರಕಾರ್ಯದಲ್ಲಿ ನಾನು ಪಡೆದ ಯಥಾವತ್ತು ಮಾಹಿತಿಯನ್ನು ಇಲ್ಲಿ ಕೊಡಲಾಗಿದೆ. ಒಂದು ಪ್ರಶ್ನಾವಳಿಯ ಮೂಲಕ ಪಡೆದ ಅಂಕಿಅಂಶಗಳನ್ನು, ಕೆಲವು ಕೋಷ್ಟಕಗಳನ್ನು ತಯಾರಿಸಿ ಇಲ್ಲಿ ವ್ಯವಸ್ಥಿತವಾಗಿ ಅವುಗಳನ್ನು ವರ್ಗೀಕರಿಸಲಾಗಿದೆ. ಈ ಅಂಕಿಅಂಶಗಳು ಮೂಲತಃವಾಗಿ ಬಳ್ಳಾರಿ ಜಿಲ್ಲೆಯಲ್ಲಿ ವಾಸಿಸುವ ಡೊಂಬರ ಸ್ಥಿತಿಗತಿಗಳನ್ನು ತೋರಿಸುತ್ತವೆ.

ಸಮುದಾಯದ ಅಧ್ಯಯನವೊಂದು, ಅಧ್ಯಯನಕ್ಕೊಳಪಡುವ ಸಮುದಾಯದ ಕಷ್ಟಸುಖಗಳ ಭಾಗವಾಗಿಯೇ ರೂಪಗೊಳ್ಳಬೇಕಿದೆ. ಏಕೆಂದರೆ ಭಾರತದಂತಹ ಶ್ರೇಣೀಕೃತ ಸಮಾಜದಲ್ಲಿ ಡೊಂಬರಂತಹ ಸಮುದಾಯವು ಯಾವ ಅಧಿಕಾರಗಳನ್ನು, ಹಕ್ಕುಗಳನ್ನು ಪಡೆಯದೆ ಅವಕಾಶಗಳಿಂದ ವಂಚಿತವಾಗಿರುವ ಸಂದರ್ಭದಲ್ಲಿ ನಾವು ಮಾಡುವ ಅಧ್ಯಯನವು, ಆ ಸಮುದಾಯದ ನಿತ್ಯದ ಬವಣೆಯ ಒಂದು ಭಾಗವಾಗಿಯೇ ರೂಪಗೊಳ್ಳಬೇಕಿದೆ. ಸದರಿ ಅಧ್ಯಯನವು ಇದೇ ಬಗೆಯ ತಾತ್ವಿಕ ಹಿನ್ನೆಲೆಯಲ್ಲಿ ರೂಪಗೊಂಡಿದೆ. ಇದು ಪರಿಪೂರ್ಣ ಅಧ್ಯಯನವೆಂದು ನಾನು ಭಾವಿಸುವುದಿಲ್ಲ. ಇದು ನನ್ನ ಪ್ರಮಾಣಿಕ ಪ್ರಯತ್ನವೆಂದು ಮಾತ್ರ ಹೇಳಬಲ್ಲೆ. ಮುಂದಿನ ಅಧ್ಯಯನಗಳಿಗೆ ಇದು ಪೂರಕವಾದರೆ ನನ್ನ ಶ್ರಮ ಸಾರ್ಥಕವೆಂದೇ ಭಾವಿಸುವೆ.

❑❑

# ಗ್ರಂಥ ಋಣ


೧. ಟಿ.ಆರ್. ಚಂದ್ರಶೇಖರ್, ಅಭಿವೃದ್ಧಿ ಮೀಮಾಂಸೆ, ೧೯೯೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಅನು. ಡಾ.ಎಂ.ಎನ್. ಜವರಯ್ಯ, ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ, ಸಿದ್ಧಾರ್ಥ ಗ್ರಂಥಮಾಲೆ, ಕುವೆಂಪು ನಗರ, ಮೈಸೂರು, ೧೯೯೫

೩. ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ.೫, ಕರ್ನಾಟಕ ಸರ್ಕಾರ, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೪. ಹಿ.ಚಿ. ಬೋರಲಿಂಗಯ್ಯ, ಕಾಡುಕಾಂಕ್ರಿಟ್ ಮತ್ತು ಜಾನಪದ, ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ, ೧೯೯೫

೫. ಡಾ.ಎಚ್.ಜೆ. ಲಕ್ಕಪ್ಪಗೌಡ, ಕರ್ನಾಟಕ ಬುಡಕಟ್ಟುಗಳು, ಸಂಪುಟ.೧,೨ ಜನಪದ ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೯

೬. ಕೆ.ಎಲ್. ಗೋಪಾಲಕೃಷ್ಣರಾವ್, ಕುಟುಂಬ ಖಾಸಗೀ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ, ಪ್ರಗತಿ ಪ್ರಕಾಶನ, ಮಾಸ್ಕೋ

೭. ಹಿ.ಚಿ. ಬೋರಲಿಂಗಯ್ಯ, ಗಿರಿಜನ ನಾಡಿಗೆ ಪ್ರಯಾಣ, ರಾಗಿಕೊಟ್ಟಿ ಪ್ರಕಾಶನ, ಬೆಂಗಳೂರು,

೮. ಡಾ. ತೇಜಸ್ವಿ ಕಟ್ಟೀಮನಿ, ಘಟ್ಟಿ ಹೊಸಹಳ್ಳಿ ಗಟ್ಟಿಗ, ವಾಲ್ಮೀಕಿ ಸಾಹಿತ್ಯ ಸಂಪದ ಹರ್ತಿಕೋಟೆ, ಹಿರಿಯೂರು, ತಾ. ಚಿತ್ರದುರ್ಗ, ೨೦೦೨

೯. ಅನು. ರಾಹು, ಜಾತಿ ವ್ಯವಸ್ಥೆ ಸಮಸ್ಯೆ ಸವಾಲುಗಳು, ಅನುಭವ ಪ್ರಕಾಶನ, ಗುಲಬರ್ಗಾ, ೧೯೯೯

೧೦. ದೇವೇಂದ್ರಕುಮಾರ್ ಸಿ. ಹಕಾರಿ, ಡೊಂಬರ ಸಂಸ್ಕೃತಿ,

೧೧. ಡಾ. ವಿಶ್ವನಾಥ ಕರ್ನಾಡ್, ತುಳುವರು ಮುಂಬಯಿ ವಲಸೆ, ಕನ್ನಡ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ, ಮುಂಬಯಿ, ೧೯೯೪

೧೨. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩. ದಿಕ್ಕು ತಪ್ಪಿದ ಕರ್ನಾಟಕ ಭೂಸುದಾರಣೆ, ಕ್ಷೀರ ಸಾಗರ ನಿಯೆಟ್ಸ್, ೧೯೮೪, ಕುಕ್ಸಟನ್, ಬೆಂಗಳೂರು.

೧೪. ಟಿ.ಆರ್. ಚಂದ್ರಶೇಖರ್, ಮಹಿಳೆ ಮತ್ತು ಆರ್ಥಿಕ ಅಭಿವೃದ್ಧಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೫. ಎ.ಎಸ್. ಪ್ರಭಾಕರ್, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೬. ಕೆ.ಎಂ. ಮೈತ್ರಿ, ಬುಡಕಟ್ಟು ಕುಲಕಸುಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೭. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೧೮. ಹೆಚ್.ವಿ. ನಾಗೇಶ್, ಬದಲಾಗುತ್ತಿರುವ ಭಾರತೀಯ ಗ್ರಾಮ, ಕರ್ನಾಟಕ ವಿ.ವಿ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೮೨

೧೯. ಕುಮಾರ ಕಕ್ಕಯ್ಯ, ಬಸವ ಧರ್ಮ ಯಾರ ಸೊತ್ತು, ಪೋಳ್ ಪ್ರಕಾಶನ, ಕಕ್ಕಯ್ಯ ನಿವಾಸ, ವಿಜಾಪುರ


□□

ಕೋಷ್ಟಕ ೧

## ಡೊಂಬರ ನೆಲವಾರು ಜನಸಂಖ್ಯೆ ಮತ್ತು ವಯೋಗುಂಪುಗಳು

| ತಾಲೂಕು | ನೆಲೆ | ಕುಟುಂಬಗಳ | ಜನಸಂಖ್ಯೆ | | | ೦ ರಿಂದ ೨೦ | | | ೨೧ ರಿಂದ ೧೦೦ | | |
|---|---|---|---|---|---|---|---|---|---|---|---|
| | | ಸಂಖ್ಯೆ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧. ಬಳ್ಳಾರಿ | ಬಳ್ಳಾರಿ | ೧ | ೨ | ೨ | ೪ | ೧ | ೧ | ೨ | ೧ | ೧ | ೨ |
| ೨. ಹೊಸಪೇಟೆ | ಹೊಸಪೇಟೆ | ೩ | ೧೦ | ೮ | ೧೮ | ೬೫ | ೩ | ೯ | ೪ | ೫ | ೯ |
| | ಕಮಲಾಪುರ | ೮ | ೧೮ | ೨೦ | ೩೮ | ೯ | ೯ | ೧೮ | ೯ | ೧೧ | ೨೦ |
| ೩. ಕೂಡ್ಲಿಗಿ | ಕೂಡ್ಲಿಗಿ | ೧೮ | ೫೯ | ೬೧ | ೧೨೦ | ೩೦ | ೩೦ | ೬೦ | ೨೭ | ೩೩ | ೬೦ |
| | ನಾಗರಹುಣಸೆ | ೨ | ೯ | ೩ | ೧೨ | ೮ | ೧ | ೯ | ೧ | ೨ | ೩ |
| | ಎ. ದಿಬ್ಬದಹಳ್ಳಿ | ೯ | ೩೬ | ೩೫ | ೭೧ | ೧೬ | ೧೮ | ೩೪ | ೧೯ | ೨೦ | ೩೯ |
| | ಸೋವೆನಹಳ್ಳಿ | ೧೨ | ೨೯ | ೩೩ | ೬೨ | ೧೬ | ೧೮ | ೩೪ | ೧೪ | ೧೪ | ೨೮ |
| | ಮರಬನಹಳ್ಳಿ | ೧೧ | ೩೪ | ೩೭ | ೭೧ | ೧೭ | ೨೨ | ೩೯ | ೧೭ | ೧೫ | ೩೨ |
| | ಕರ್ನಾರಹಟ್ಟಿ | ೧೯ | ೪೬ | ೩೮ | ೮೪ | ೨೫ | ೧೪ | ೩೯ | ೨೬ | ೨೬ | ೫೨ |
| ೪. ಸಂಡೂರು | ಸಂಡೂರು | ೧೨ | ೫೭ | ೫೧ | ೧೦೮ | ೩೧ | ೨೫ | ೫೬ | ೨೬ | ೨೬ | ೫೨ |
| ೫. ಸಿರುಗುಪ್ಪ | ಬೂದುಗುಪ್ಪ | ೬ | ೩೩ | ೩೨ | ೬೫ | ೧೩ | ೧೭ | ೩೦ | ೨೦ | ೧೫ | ೩೫ |
| | ಒಟ್ಟು | ೧೦೧ | ೩೩೩ | ೩೨೦ | ೬೫೩ | ೧೯೨ | ೧೫೮ | ೩೩೦ | ೧೫೯ | ೧೬೪ | ೩೨೩ |

## ಕೋಷ್ಟಕ ೨

# ಡೊಂಬರ ನೆಲೆವಾರು ವೈವಾಹಿಕ ಸ್ಥಾನಮಾನ

| ತಾಲೂಕು | ನೆಲೆ | ಕುಟುಂಬಗಳ ಸಂಖ್ಯೆ | ವಿವಾಹಿತರು ಗಂಡು | ವಿವಾಹಿತರು ಹೆಣ್ಣು | ವಿವಾಹಿತರು ಒಟ್ಟು | ಅವಿವಾಹಿತರು ಗಂಡು | ಅವಿವಾಹಿತರು ಹೆಣ್ಣು | ಅವಿವಾಹಿತರು ಒಟ್ಟು | ವಿಧವೆ ವಿದುರರು ಗಂಡು | ವಿಧವೆ ವಿದುರರು ಹೆಣ್ಣು | ವಿಧವೆ ವಿದುರರು ಒಟ್ಟು | ಬೇರ್ಪಟ್ಟವರು ಗಂಡು | ಬೇರ್ಪಟ್ಟವರು ಹೆಣ್ಣು | ಬೇರ್ಪಟ್ಟವರು ಒಟ್ಟು | ವೇಶಿಯರು ಗಂಡು | ವೇಶಿಯರು ಹೆಣ್ಣು | ವೇಶಿಯರು ಒಟ್ಟು |
|---|---|---|---|---|---|---|---|---|---|---|---|---|---|---|---|---|---|
| ೧. ಬಳ್ಳಾರಿ | ಬಳ್ಳಾರಿ | ೧ | ೧ | ೧ | ೨ | ೧ | ೧ | ೨ | - | - | - | - | - | - | - | - | - |
| ೨. ಹೊಸಪೇಟೆ | ಹೊಸಪೇಟೆ | ೩ | ೪ | ೪ | ೮ | ೫ | ೫ | ೧೦ | - | - | - | - | - | - | - | - | - |
| | ಕಮಲಾಪುರ | ೮ | ೧೧ | ೮ | ೧೯ | ೮ | ೬ | ೧೪ | ೧ | - | ೧ | - | - | - | - | - | ೪ |
| ೩. ಕೂಡ್ಲಿಗಿ | ಕೂಡ್ಲಿಗಿ | ೧೮ | ೨೦ | ೨೦ | ೪೦ | ೩೭ | ೩೩ | ೭೦ | ೧ | - | ೧ | - | - | - | - | - | ೬ |
| | ನಾಗರಹುಣಸೆ | ೨ | ೧ | ೧ | ೨ | ೮ | ೧ | ೯ | - | - | - | - | - | - | - | - | ೧ |
| | ಎ. ದಿಬ್ಬದಹಳ್ಳಿ | ೯ | ೧೪ | ೧೪ | ೨೮ | ೨೦ | ೧೯ | ೩೯ | ೧ | - | ೧ | - | - | - | - | - | ೩ |
| | ಸೋವೇನಹಳ್ಳಿ | ೧೨ | ೧೧ | ೧೧ | ೨೨ | ೧೯ | ೧೮ | ೩೭ | - | ೧ | ೧ | ೧ | ೧ | ೩ | - | - | ೧ |
| | ಮರಬನಹಳ್ಳಿ | ೧೧ | ೧೫ | ೧೫ | ೩೦ | ೧೮ | ೨೧ | ೩೯ | ೧ | ೧ | ೨ | - | - | - | - | - | - |
| | ಕರ್ನಾರಹಟ್ಟಿ | ೧೯ | ೧೭ | ೧೯ | ೩೬ | ೨೯ | ೧೫ | ೪೪ | - | ೩ | ೩ | ೨ | ೩ | ೫ | - | - | - |
| ೪. ಸಂಡೂರು | ಸಂಡೂರು | ೧೨ | ೧೧ | ೧೧ | ೨೨ | ೧೩ | ೮ | ೨೧ | - | ೫ | ೫ | - | ೧ | ೧ | - | - | ೧ |
| ೫. ಸಿರುಗುಪ್ಪ | ಬೂದುಗುಪ್ಪ | ೬ | ೧೭ | ೧೬ | ೩೩ | ೧೮ | ೧೪ | ೩೨ | ೩ | ೧ | ೪ | - | ೧ | ೧ | - | - | - |
| | ಒಟ್ಟು | ೧೦೧ | ೧೨೨ | ೧೨೦ | ೨೪೨ | ೧೭೬ | ೧೪೧ | ೩೧೭ | ೭ | ೧೧ | ೧೮ | ೩ | ೬ | ೯ | - | - | ೧೬ |

ಕೋಷ್ಟಕ ೩

# ಡೊಂಬರ ನೆಲೆವಾರು ಶೈಕ್ಷಣಿಕ ಮಟ್ಟ

| ತಾಲೂಕು | ನೆಲೆ | ಕುಟುಂಬಗಳ | ಪ್ರಾಥಮಿಕ | | | ಪ್ರೌಢ | | | ಪದವಿಪೂರ್ವ | | | ಉನ್ನತ | | | ಅವಿದ್ಯಾವಂತರು | | |
|---|---|---|---|---|---|---|---|---|---|---|---|---|---|---|---|---|---|
| | | ಸಂಖ್ಯೆ | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧. ಬಳ್ಳಾರಿ | ಬಳ್ಳಾರಿ | ೧ | ೧ | ೧ | ೨ | - | - | - | - | ೧ | ೧ | ೧ | - | ೧ | - | - | - |
| ೨. ಹೊಸಪೇಟೆ | ಹೊಸಪೇಟೆ | ೩ | ೧ | ೨ | ೩ | ೩ | ೧ | ೪ | ೨ | ೧ | ೩ | ೧ | ೧ | ೨ | - | - | - |
| | ಕಮಲಾಪುರ | ೮ | ೯ | ೬ | ೧೫ | ೩ | ೩ | ೪ | ೧ | - | ೧ | - | - | - | - | - | - |
| ೩. ಕೂಡ್ಲಿಗಿ | ಕೂಡ್ಲಿಗಿ | ೧೮ | ೨೦ | ೧೫ | ೩೫ | ೧೬ | ೧೧ | ೨೭ | ೭ | ೫ | ೧೨ | ೧ | ೧ | ೨ | ೬ | ೧೧ | ೧೭ |
| | ನಾಗರಹುಣಸೆ | ೨ | ೫ | ೧ | ೬ | ೨ | ೧ | ೩ | ೨ | ೧ | ೩ | - | - | - | ೧ | ೧ | ೨ |
| | ಎ. ದಿಬ್ಬದಹಳ್ಳಿ | ೯ | ೧೨ | ೧೪ | ೨೬ | ೨ | ೩ | ೫ | ೩ | - | ೩ | ೧ | - | ೧ | ೧೧ | ೧೩ | ೨೪ |
| | ಸೋವೆನಹಳ್ಳಿ | ೧೨ | ೧೩ | ೧೧ | ೨೪ | ೧ | ೧ | ೨ | - | - | - | - | - | - | ೧೫ | ೧೫ | ೩೦ |
| | ಮರಬನಹಳ್ಳಿ | ೧೧ | ೧೦ | ೯ | ೧೯ | - | - | - | ೧ | - | ೧ | - | - | - | ೧೯ | ೧೯ | ೩೮ |
| | ಕರ್ನಾರಹಟ್ಟಿ | ೧೯ | ೧೩ | ೭ | ೨೦ | ೫ | ೨ | ೭ | ೧ | - | ೧ | - | - | - | ೧೪ | ೧೭ | ೩೧ |
| ೪. ಸಂಡೂರು | ಸಂಡೂರು | ೧೨ | ೨೫ | ೧೮ | ೪೩ | ೪ | ೩ | ೭ | ೨ | ೧ | ೩ | - | - | - | ೧೪ | ೨೧ | ೩೫ |
| ೫. ಸಿರುಗುಪ್ಪ | ಬೂದುಗುಪ್ಪ | ೬ | ೨೧ | ೧೪ | ೩೫ | ೪ | ೨ | ೬ | - | ೧ | ೧ | - | - | - | ೧೨ | ೧೭ | ೨೯ |
| | ಒಟ್ಟು | ೧೦೧ | ೧೩೮ | ೯೮ | ೨೨೮ | ೩೯ | ೨೬ | ೬೫ | ೧೯ | ೧೦ | ೨೯ | ೪ | ೨ | ೬ | ೯೨ | ೧೧೪ | ೨೦೬ |

ಕೋಷ್ಟಕ ೪

## ಡೊಂಬರು ಅವಲಂಬಿಸಿರುವ ಕಸುಬುಗಳು

| ತಾಲೂಕು | ನೆಲೆ | ಕುಟುಂಬಗಳ ಸಂಖ್ಯೆ | ಕೃಷಿ ಕಸುಬು | | | ಕೃಷಿ ಕೂಲಿ | | | ವ್ಯಾಪಾರಸ್ಥರು | | | ಸರಕಾರಿ ಹುದ್ದೆ | | | ಇತರೆ ಖಾಸಗಿ | | |
|---|---|---|---|---|---|---|---|---|---|---|---|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧. ಬಳ್ಳಾರಿ | ಬಳ್ಳಾರಿ | ೧ | - | - | - | - | - | - | - | - | - | ೧ | - | ೧ | - | - | - |
| ೨. ಹೊಸಪೇಟೆ | ಹೊಸಪೇಟೆ | ೩ | - | - | - | - | - | - | - | - | - | ೨ | - | ೨ | ೩ | - | ೩ |
| | ಕಮಲಾಪುರ | ೮ | - | - | - | ೩ | ೯ | ೧೨ | ೨ | ೧ | ೩ | - | - | | ೬ | ೧ | ೭ |
| ೩. ಕೂಡ್ಲಿಗಿ | ಕೂಡ್ಲಿಗಿ | ೧೮ | ೨ | ೪ | ೬ | ೩ | ೧ | ೫ | ೫ | ೪ | ೯ | ೬ | ೩ | ೯ | ೬ | ೩ | ೯ |
| | ನಾಗರಹುಣಸೆ | ೨ | ೧ | ೧ | ೨ | ೬ | - | ೬ | - | - | - | - | ೧ | ೧ | - | - | - |
| | ಎ. ದಿಬ್ಬದಹಳ್ಳಿ | ೯ | ೧೫ | ೧೩ | ೨೮ | ೪ | ೩ | ೭ | ೩ | - | ೩ | ೪ | ೧ | ೫ | ೩ | ೧ | ೪ |
| | ಸೋವೆನಹಳ್ಳಿ | ೧೨ | ೬ | ೩ | ೯ | ೯ | ೯ | ೧೮ | - | - | - | ೧ | - | ೧ | - | - | - |
| | ಮರಬನಹಳ್ಳಿ | ೧೧ | ೬ | ೭ | ೧೩ | ೮ | ೯ | ೧೭ | ೨ | - | ೨ | - | - | - | ೪ | - | ೪ |
| | ಕರ್ನಾರಹಟ್ಟಿ | ೧೯ | ೧ | ೧ | ೨ | ೧೩ | ೧೬ | ೨೯ | - | - | - | - | - | - | - | - | - |
| ೪. ಸಂಡೂರು | ಸಂಡೂರು | ೧೨ | ೪ | ೪ | ೮ | ೯ | ೭ | ೧೫ | ೭ | ೨ | ೯ | - | - | - | ೧೨ | ೩ | ೧೫ |
| ೫. ಸಿರುಗುಪ್ಪ | ಬೂದುಗುಪ್ಪ | ೬ | ೪ | ೪ | ೮ | ೭ | ೫ | ೧೨ | ೩ | - | ೩ | - | - | - | ೨ | - | ೨ |
| | ಒಟ್ಟು | ೧೦೧ | ೩೯ | ೩೭ | ೭೬ | ೫೬ | ೬೦ | ೧೧೬ | ೨೨ | ೭ | ೨೯ | ೧೪ | ೫ | ೧೯ | ೩೬ | ೮ | ೪೪ |

## ಕೋಷ್ಟಕ ೫

## ವಸತಿ ಮಾದರಿ

| ತಾಲೂಕು | ನೆಲೆ | ಕುಟುಂಬಗಳ ಸಂಖ್ಯೆ | ಗುಡಿಸಲು | ಮಾಳಿಗೆ ಮನೆ | ಸರ್ಕಾರಿ ಮನೆ | ಆರ್.ಸಿ.ಸಿ. | ಬಾಡಿಗೆ ಮನೆಯವರು |
|---|---|---|---|---|---|---|---|
| ೧. ಬಳ್ಳಾರಿ | ಬಳ್ಳಾರಿ | ೧ | -- | -- | -- | -- | ೧ |
| ೨. ಹೊಸಪೇಟೆ | ಹೊಸಪೇಟೆ | ೩ | -- | ೧ | -- | ೧ | ೧ |
| | ಕಮಲಾಪುರ | ೮ | -- | ೬ | ೨ | -- | ೨ |
| ೩. ಕೂಡ್ಲಿಗಿ | ಕೂಡ್ಲಿಗಿ | ೧೮ | ೨ | ೧೦ | ೪ | ೩ | ೩ |
| | ನಾಗರಹುಣಸೆ | ೨ | -- | ೨ | -- | -- | -- |
| | ಎ. ದಿಬ್ಬದಹಳ್ಳಿ | ೯ | ೨ | ೫ | ೨ | -- | ೧ |
| | ಸೋವೆನಹಳ್ಳಿ | ೧೨ | ೧ | ೯ | ೧ | ೧ | -- |
| | ಮರಬನಹಳ್ಳಿ | ೧೧ | ೮ | ೨ | ೧ | ೪ | -- |
| | ಕರ್ನಾರಹಟ್ಟಿ | ೧೯ | ೧೩ | -- | ೬ | -- | ೬ |
| ೪. ಸಂಡೂರು | ಸಂಡೂರು | ೧೨ | -- | ೮ | ೨ | ೨ | ೩ |
| ೫. ಸಿರುಗುಪ್ಪ | ಬೂದುಗುಪ್ಪ | ೬ | ೨ | ೭ | ೨ | -- | ೧ |
| | ಒಟ್ಟು | ೧೦೧ | ೨೮ | ೫೦ | ೨೦ | ೬ | ೧೯ |

ಕೋಷ್ಟಕ ೬

## ಡೊಂಬರ ನೆಲೆಗಳು ಮತ್ತು ಬೆಡಗಗಳು

| ತಾಲೂಕು | ನೆಲೆ | ಕುಟುಂಬಗಳ ಸಂಖ್ಯೆ | ಕಟ್ಟೆಮನೆ | ಮಲ್ಲಿಗೆ | ಯನಮಲರು | ಸುಸಗದರು | ಗುಜ್ಜಲರು | ಮಾಮುಂಡ್ಲರು | ಮಳೆಲರು |
|---|---|---|---|---|---|---|---|---|---|
| ೧. ಬಳ್ಳಾರಿ | ಬಳ್ಳಾರಿ | ೧ | -- | ೧ | -- | -- | -- | -- | -- |
| ೨. ಹೊಸಪೇಟೆ | ಹೊಸಪೇಟೆ | ೩ | ೧ | -- | ೧ | -- | -- | -- | -- |
| | ಕಮಲಾಪುರ | ೮ | ೮ | -- | -- | -- | -- | -- | -- |
| ೩. ಕೂಡ್ಲಿಗಿ | ಕೂಡ್ಲಿಗಿ | ೧೮ | -- | ೫ | -- | ೮ | -- | ೫ | -- |
| | ನಾಗರಹುಣಸೆ | ೨ | -- | ೨ | -- | -- | -- | -- | -- |
| | ಎ. ದಿಬ್ಬದಹಳ್ಳಿ | ೯ | -- | -- | -- | -- | ೯ | -- | -- |
| | ಸೋವೆನಹಳ್ಳಿ | ೧೨ | -- | ೩ | -- | -- | ೯ | -- | -- |
| | ಮರಬನಹಳ್ಳಿ | ೧೧ | -- | ೧ | ೧೦ | -- | -- | -- | -- |
| | ಕರ್ನಾರಹಟ್ಟಿ | ೧೯ | -- | ೧೨ | ೧ | -- | ೬ | -- | -- |
| ೪. ಸಂಡೂರು | ಸಂಡೂರು | ೧೨ | -- | ೮ | ೪ | -- | -- | -- | -- |
| ೫. ಸಿರುಗುಪ್ಪ | ಬೂದುಗುಪ್ಪ | ೬ | -- | -- | ೧ | -- | -- | ೫ | -- |
| | ಒಟ್ಟು | ೧೦೧ | ೯ | ೨೧ | ೧೭ | ೮ | ೨೪ | ೫ | ೫ |

# ವಕ್ತೃಗಳ ವಿವರ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ವಿಳಾಸ |
|---|---|---|---|---|
| ೦೧. | ಡೊಂಬರ ಹುಲುಗಪ್ಪ | ೩೮ | ಕೃಷಿ ಕೂಲಿ | ಕಮಲಾಪುರ, ಹೊಸಪೇಟೆ ತಾ. |
| ೦೨. | ಡಿ. ರಾಮಚಂದ್ರಪ್ಪ | ೬೫ | ಮೆಕಾನಿಕ್ | ಮೆದಾರ ಓಣಿ, ಹೊಸಪೇಟೆ |
| ೦೩. | ಡಿ. ಸೋಮಶೇಖರ್ | ೪೦ | ಸರ್ಕಾರಿ ನೌಕರ | ಅಮರಾವತಿ, ಹೊಸಪೇಟೆ, ದೂ.ಸಂ. ೪೨೩೫೮೪ |
| ೦೪. | ಡಿ. ಪ್ರಹ್ಲಾದ | ೪೫ | ಪೋಸ್ಟ್‌ಮ್ಯಾನ್ | ೭ನೇ ವಾರ್ಡ್, ಕೂಡ್ಲಿಗಿ, ದೂ.ಸಂ. ೩೪೦೦೫೨ |
| ೦೫. | ಡಿ. ರಾಮಣ್ಣ | ೫೮ | ನಿ. ಪೋಸ್ಟ್‌ಮ್ಯಾನ್ | ೭ನೇ ವಾರ್ಡ್, ಕೂಡ್ಲಿಗಿ, ದೂ.ಸಂ. ೩೪೦೧೩೮ |
| ೦೬. | ಡಿ. ಧರ್ಮಪ್ಪ | ೪೩ | ಹೆ. ಮೆಕಾನಿಕ್ | ೭ನೇ ವಾರ್ಡ್, ಕೂಡ್ಲಿಗಿ, ದೂ.ಸಂ. ೩೪೦೮೨೭ |
| ೦೭. | ಡಾ. ಶ್ರೀನಿವಾಸ ಡಿ. | ೩೮ | ಡಾಕ್ಟರ್ | ವಿಮ್ಸ್ ಹತ್ತಿರ, ಬಳ್ಳಾರಿ, ದೂ.ಸಂ. ೨೪೨೦೬೬ |
| ೦೮. | ಡಿ. ಅಂಜಿನಪ್ಪ | ೪೦ | ಕೃಷಿಕ | ಮರಬನಹಳ್ಳಿ ಪೊ. ಕೂಡ್ಲಿಗಿ ತಾ. |
| ೦೯. | ಡಿ. ಹುಲೆಪ್ಪ | ೬೦ | ಬೇಸಾಯ | ಕರ್ನಾರಹಟ್ಟಿ, ಕೂಡ್ಲಿಗಿ ತಾ. |
| ೧೦. | ಡಿ. ತಿಪ್ಪೇಸ್ವಾಮಿ | ೨೮ | ನಿರುದ್ಯೋಗಿ | ಕರ್ನಾರಹಟ್ಟಿ, ಕೂಡ್ಲಿಗಿ ತಾ. |
| ೧೧. | ಡಿ. ಶ್ರೀನಿವಾಸ | ೪೧ | ವ್ಯಾಪಾರಸ್ಥ | ಆನಂದ ಬಜಾರ, ೩ನೇ ವಾರ್ಡ್, ಸಂಡೂರು ತಾ. |
| ೧೨. | ಡಿ. ಲಿಂಗಪ್ಪ | ೪೮ | ಕಂಟ್ರಾಕ್ಟರ್ | ಕಮಲಾಪುರ, ಹೊಸಪೇಟೆ ತಾ. |
| ೧೩. | ಡಿ. ಓಬಳಮ್ಮ | ೫೦ | ಕೃಷಿಕೂಲಿ | ಆನಂದ ಬಜಾರ, ೩ನೇ ವಾರ್ಡ್, ಸಂಡೂರು |
| ೧೪. | ಡಿ. ಸರೋಜಮ್ಮ | ೪೦ | ಕಲಾವಿದೆ | ೭ನೇ ವಾರ್ಡ್, ಡೊಂಬರ ಓಣಿ, ಕೂಡ್ಲಿಗಿ |
| ೧೫. | ಡಿ. ಅಡಿವಮ್ಮ | ೫೩ | ಕಲಾವಿದೆ | ೭ನೇ ವಾರ್ಡ್, ಡೊಂಬರ ಓಣಿ, ಕೂಡ್ಲಿಗಿ |
| ೧೬. | ಡಿ. ಈರಣ್ಣ | ೩೮ | ಕೃಷಿಕ | ಬೂದುಗುಪ್ಪ ಪೊ. ಸಿರುಗುಪ್ಪ ತಾ. ಪೊ. ೬೫೫೭೮೩ |
| ೧೭. | ಡಿ. ಗಾಂಧಿಲಿಂಗಪ್ಪ | ೩೦ | ಕೃಷಿಕ | ಬೂದುಗುಪ್ಪ ಪೊ. ಸಿರುಗುಪ್ಪ ತಾ. ಪೊ. ೬೫೫೭೮೩ |
| ೧೮. | ಡಿ. ಲಕ್ಷ್ಮಿ | ೩೭ | ಕೃಷಿ ಕೂಲಿ | ಸೋವೆನಹಳ್ಳಿ ಪೊ. ಸಂಡೂರು ತಾ. |
| ೧೯. | ಡಿ. ಕರಿಯಪ್ಪ | ೫೫ | ಕೃಷಿ ಕೂಲಿ | ಸೋವೆನಹಳ್ಳಿ ಪೊ. ಸಂಡೂರು ತಾ. |
| ೨೦. | ಡಿ. ನೀಲಮ್ಮ | ೩೫ | ಟೀಚರ್ | ನಾಗರಹುಣಸೆ .ಪೊ, ಕೂಡ್ಲಿಗಿ ತಾ. |
| ೨೧. | ಡಿ. ಮಂಜುನಾಥ | ೨೮ | ಕೃಷಿಕ | ಎ. ದಿಬ್ಬದಹಳ್ಳಿ, ಕೂಡ್ಲಿಗಿ ತಾ. |
| ೨೨. | ಡಿ. ಹುತಿಪ್ಪ | ೪೯ | ಕೃಷಿಕ | ಎ. ದಿಬ್ಬದಹಳ್ಳಿ, ಕೂಡ್ಲಿಗಿ ತಾ. |

□□

